

ಅಂಬಿಗ ನಾನಿನ್ನ ನಂಬಿದೆ ಜಗ
ದಂಬಾ ರಮಣನೇ ನಂಬಿದೆ ॥ ಪಲ್ಲವಿ ॥

ತುಂಬಿದ ಹರಿಗೋಲಂಬಿಗ ಅದ
ಕೊಂಬತ್ತು ಛಿದ್ರವು ಅಂಬಿಗ
ಸಂಭ್ರಮದಿ ನೋಡಂಬಿಗ ಅದ
ರಿಂಬು ನೋಡಿ ನಡೆಸಂಬಿಗ 1

ಹೊಳೆಯ ಭರವ ನೋಡಂಬಿಗ ಅದಕೆ
ಸೆಳವು ಘನವಯ್ಯ ಅಂಬಿಗ
ಸುಳಿಯೊಳು ಮುಳುಗಿದೆ ಅಂಬಿಗ ಎನ್ನ
ಸೆಳೆದು ಕೊಂಡೊಯ್ಯೊ ನೀ ನಂಬಿಗ 2

ಸತ್ಯವೆಂಬುದೆ ಹುಟ್ಟಂಬಿಗ ಸದಾ
ಭಕ್ತಿಯೆಂಬುದೆ ಪಥವಂಬಿಗ
ನಿತ್ಯ ಮೂರುತಿ ಪುರಂದರ ವಿಠಲ ನಮ್ಮ
ಮುಕ್ತಿ ಮಂಟಪಕೊಯ್ಯೊ ಅಂಬಿಗ 3

— ಶ್ರೀ ಪುರಂದರದಾಸರು



# 1985 ರ ಸಂಕ್ರಾಂತಿಯ ಶುಭಾಶಯಗಳು

---

ಸಂದರ್ಶಿಸಿ ಆನಂದಿಸಿ

# ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ

### ವಾರ್ಷಿಕ ಬ್ರಹ್ಮೋತ್ಸವಗಳು 1985

| | |
|---|---|
| 9–2–85 | ಅಂಕುರಾರ್ಪಣೆ |
| 14–2–85 | ಗರುಡೋತ್ಸವ |
| 17–2–85 | ರಥೋತ್ಸವ |
| 18–2–85 | ತೀರ್ಥವಾರಿ |

ಬ್ರಹ್ಮೋತ್ಸವಗಳಲ್ಲಿ ದಿನವೂ ಉತ್ಸವಗಳೊಂದಿಗೆ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ. ಶ್ರೀನಿವಾಸಮಂಗಾಪುರ ತಿರುಪತಿಯಿಂದ 6 ಕಿ.ಮೀ. ದೂರದಲ್ಲಿ ತಿರುಪತಿ–ಮದನಪಲ್ಲಿ ರಸ್ತೆಯಲ್ಲಿದೆ. ತಿರುಪತಿ ಹಾಗೂ ಚಂದ್ರಗಿರಿಗಳಿಂದ ವಾಹನ ಸೌಕರ್ಯವಿದೆ.

ತಿರುಮಲೆ – ತಿರುಪತಿ ದೇವಸ್ಥಾನಗಳು.

ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.




ಗೌರವ ಸಂಪಾದಕರು :

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೫] ಜನವರಿ ೧೯೮೫ [ಸಂಚಿಕೆ ೮


# ವಿಷಯಸೂಚಿ

# ಸಂಪಾದಕೀಯ

ನಾವು ಭಾರತೀಯರು ಬಹುದೇವತೋಪಾಸಕರು. ಹರಿ ಸರ್ವೋತ್ತಮನೆಂದರೂ ಹರಿಯಂಶವನ್ನು ಹಲವು ದೇವತೆಗಳಲ್ಲಿ ಕಂಡು ಏಕತೆಯನ್ನೂ ವೈವಿಧ್ಯವನ್ನೂ ಒಟ್ಟಿಗೆ ಕಾಯ್ದುಕೊಳ್ಳುವವರು. ಇಂತಲ್ಲಿ ಇಹದ ಕಣ್ಣಿಗೆ ಕಾಣುವ ದೈವಗಳಲ್ಲಿ ಸೂರ್ಯನಿಗೆ ಪ್ರಾಧಾನ್ಯ ಹೆಚ್ಚು. ಕಾರಣ ಪ್ರಕೃತಿಯುಪಾಸನೆಯಲ್ಲಿ ಸೂರ್ಯನಿಗಿರುವ ಪ್ರಥಮ ಸ್ಥಾನ.

ಸೂರ್ಯೋಪಾಸನೆಯೆಂಬುದು ಬರೀ ಸನಾತನಧರ್ಮಕ್ಕೆ ಮಾತ್ರವೇ ಮೀಸಲಲ್ಲ. ಈಜಿಪ್ಷಿಯನ್ನರು, ಸುಮೇರಿಯನ್ನರು. ಅವರಿವರೆನ್ನುವುದೇನು, ಜಗತ್ತಿನ ಎಲ್ಲ ಪ್ರಾಚೀನ ನಾಗರಿಕತೆಗಳೂ ಸೂರ್ಯೋಪಾಸನೆಯಿಂದ ಸಮೃದ್ಧಿಯನ್ನು ಪಡೆದವುಗಳೇ ಹೌದು. ಕಾರಣ, ಸೂರ್ಯನ ಜೀವ ಪೋಷಕತೆ, ಜ್ಞಾನ ಪ್ರದಾತೃತೆಗಳು. ಇದನ್ನು ವಿವಿಧ ಜನಾಂಗಗಳವರು ಬೇರೆಬೇರೆ ಕಾಲದಲ್ಲಿ ಗುರುತಿಸಿ, ಕಾಲ ಗಣನೆಯನ್ನೂ ಕಲಿತರು.

ಆದರೆ ಇರುವವನು ಒಬ್ಬನೇ ಸೂರ್ಯನಲ್ಲ. ಇಂತಹ ಅನೇಕ ಸೌರವ್ಯೂಹಗಳೇ ಇವೆಯೆಂಬುದು ಈಚೆಗೆ ಖಚಿತವಾಗಿ ತಿಳಿದು ಬಂದ ಅಂಶ. ಈ ಹೊಸ ಅಂಶದ ಪರಿಶೋಧನೆಯಿಂದಾಗಿ ಹಳೆಯ ಸತ್ಯಕ್ಕೆ ಎಂದರೆ ಸೂರ್ಯನ ಜೀವ ಪೋಷಕತೆಗೆ ಅವನ ಬೆಳಕು ನೀಡುವಿಕೆಗೆ ಚ್ಯುತಿಯೇನಿಲ್ಲ. ಮಾತ್ರ ಇಂತಹದೇ ಗುಣ ಹಲವು ಸೂರ್ಯರಲ್ಲಿ ಇರಬಹುದೆಂದು ವಿಸ್ತರಿಸಬೇಕಾಗುತ್ತದೆ, ಎಂದರೆ ದ್ವಾದಶಾದಿತ್ಯರು ಎಂಬ ಕಲ್ಪನೆಗೆ ಒಂದು ಹೊಸ ಆಯಾಮ ಬರುತ್ತದೆ.

ಇನ್ನು ಸೂರ್ಯನ ಬೆಳಕು ನೀಡುವಿಕೆ. ಸರ್ವಶಾಸ್ತ್ರ ಸಂಗ್ರಹವಾದ ಭಗವದ್ಗೀತೆಯನ್ನು ಅರ್ಜುನನಿಗೆ ಹೇಳುತ್ತ ಕೃಷ್ಣ ಹೇಳುತ್ತಾನೆ. "ಇದನ್ನೆಲ್ಲ ಮೊದಲು ನಾನೇ ಸೂರ್ಯನಿಗೆ ತಿಳಿಸಿದ್ದೆ. ಆತ ಇತರರಿಗೆ ತಿಳಿಸಿದ". ಎಂದರೆ ಸೂರ್ಯ ಮಾನವ ದೇವಸಂಬಂಧದಲ್ಲಿ ಒಂದು ಮಧ್ಯದ ಕೊಂಡಿಯೆಂದಾಗುತ್ತದೆ. ಅಗ್ನಿ ದೇವತೆಗಳಿಗೆ ಹವಿಸ್ಸನ್ನು ಒಯ್ಯುವಂತೆ ಅಗ್ನಿಗೂ ಮೂಲವಾದ ಸೂರ್ಯ ದೇವತೆಗಳಿಂದ ಜ್ಞಾನವನ್ನು ಮಾನವನತ್ತ ಹರಿಸುತ್ತಾನೆ. ಎಂತಲೇ ಅವನನ್ನು ಸೂರ್ಯನಾರಾಯಣ ಎಂದರು. ಪರಮ ಪುರುಷೋತ್ತಮನ ಕಣ್ಣು ಎಂದರು. ಎಂತಲೇ ಅವನಿಗೆ ನಮಸ್ಕಾರ ಮಾಡಿ ಆ ಮೂಲಕ – 'ಕೇಶವಂ ಪ್ರತಿಗಚ್ಛತಿ' ಆಗಲಿ ಎಂದರು.

ರಥ ಸಪ್ತಮಿಯ ದಿನ ನಾವೂ ಹಿರಿಯರನ್ನು ಅನುಸರಿಸಿ, ಸೂರ್ಯನನ್ನು ನೆನೆಯೋಣ. ಆ ಮೂಲಕ ಶ್ರೀ ವೆಂಕಟೇಶ್ವರಸ್ವಾಮಿಯ ಅನುಗ್ರಹಕ್ಕೆ ಪಾತ್ರರಾಗೋಣ,

ಓಂ ತತ್ಸವಿತುರ್ವರೇಣ್ಯಂ<br>
ಭರ್ಗೋ ದೇವಸ್ಯ ಧೀ ಮಹೀ<br>
ಧಿಯೋ ಯೋನಃ ಪ್ರಚೋದಯಾತ್ ||

# ಉಡುಪಿ

ರೌಪ್ಯಪೀಠಂ ಕುಮಾರಾದ್ರಿಃ
ಕುಂಭಕಾಶೀ ಧ್ವಜೇಶ್ವರಃ
ಕ್ರೋಢ ಗೋಕರ್ಣ ಮೂಕಾಂಬಾಃ
ಸಪ್ತೈತಾ ಮೋಕ್ಷದಾಯಿಕಾಃ

ಪರುಶುರಾಮ ಸೃಷ್ಟಿಯ ಸಪ್ತ ಮೋಕ್ಷದಾಯಕ ಪುಣ್ಯಕ್ಷೇತ್ರಗಳಲ್ಲಿ ರೌಪ್ಯಪೀಠ ವೆಂಬ ಶಿವಳ್ಳಿ (ಉಡುಪಿ)ಯೂ ಒಂದಾಗಿದೆ. ಈ ಸಪ್ತಕ್ಷೇತ್ರಗಳಲ್ಲಿ ಆರು ಕ್ಷೇತ್ರಗಳು ದಕ್ಷಿಣಕನ್ನಡ ಜಿಲ್ಲೆಯಲ್ಲಿದ್ದರೆ ಗೋಕರ್ಣ ಉತ್ತರ ಕನ್ನಡ ಜಿಲ್ಲೆಯಲ್ಲಿದೆ. ಪ್ರತಿಯೊಂದು ಪುಣ್ಯಸ್ಥಳವೂ ತನ್ನದೇ ಆದಂಥ ಸ್ಥಳಪುರಾಣ, ಚಾರಿತ್ರಿಕ ವೈಶಿಷ್ಟ್ಯಗಳಿಂದ ಕೂಡಿರುತ್ತದೆ.

ಪಶ್ಚಿಮ ಕರಾವಳಿಯ ಕಡಲ ತೀರದ ಮಡಿಲಲ್ಲಿನಲ್ಲಿ ಕಂಗೊಳಿಪ ಉಡುಪಿ ಕ್ಷೇತ್ರ ಶ್ರೀಕೃಷ್ಣನ ದಿವ್ಯ ಸನ್ನಿಧಿ. ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆಯ ತಾಲೂಕು ಕೇಂದ್ರವಾಗಿ ಉಡುಪಿ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ರಂಗಗಳಲ್ಲಿ ಪ್ರಗತಿ ಪಥದಲ್ಲಿ ಸಾಗಿ ಭಾರತದ ಧಾರ್ಮಿಕ ಕೇಂದ್ರ ಬಿಂದುವೆನಿಸಿದೆ. ಜಗದ್ಗುರು ಶ್ರೀಮಧ್ವಾಚಾರ್ಯರು ಪ್ರತಿಷ್ಠಾಪಿಸಿದ ಕಡೆಗೋಲು ಬಾಲಗೋಪಾಲಕೃಷ್ಣನಿಂದಾಗಿ, ಪವಾಡ ಪುರುಷ ಸೋದೆ ಶ್ರೀ ವಾದಿರಾಜ ಯತಿವರೇಣ್ಯರ ತಪೋಪ್ರಭಾವದಿಂದ ಉಡುಪಿಯ ಹೆಸರು ಪ್ರತಿಯೊಬ್ಬನ ನಾಲಿಗೆಯಲ್ಲಿ ಸ್ಮರಿಸಲ್ಪಡುತ್ತಿದೆ. ಏಳು ಶತಮಾನಗಳಿಂದ ಉಡುಪಿಯಲ್ಲಿ ಆಧ್ಯಾತ್ಮಿಕ ತತ್ತ್ವಮಂಥನ, ವೈದಿಕ ಕರ್ಮಾನುಷ್ಠಾನ ವ್ಯವಸ್ಥಿತವಾಗಿ ನಡೆದು ಕೊಂಡು ಬರುತ್ತಿದೆ. ಉಡುಪಿಕ್ಷೇತ್ರದ ಧಾರ್ಮಿಕ ಇತಿಹಾಸ ಪರಂಪರೆ, ಆಚಾರವಿಚಾರ, ಸಂಸ್ಕೃತಿಗಳು ಅದ್ವಿತೀಯವೆನಿಸಿವೆ.

## ಉಡುಪಿ

ಉಡುಪಿ ಹೆಸರಿನ ಮೂಲರೂಪ 'ಶಿವರೂಪ್ಯ' ಅಥವಾ 'ರೌಪ್ಯ (ರೂಪ್ಯ) ಪೀಠ' ಕಾಲಾಂತರದಲ್ಲಿ 'ರಜತಪೀಠ' ವಾಗಿ ಪರಿವರ್ತನೆಗೊಂಡು ಆ ಬಳಿಕ 'ಶಿವಬೆಳ್ಳಿ'ಯಾಗಿ ಇಂದಿನ 'ಶಿವಳ್ಳಿ'ಯಾಯ್ತು. ಉಡುಪಿಯನ್ನು "ಶ್ರೀವಳ್ಳಿ" ಎಂತಲೂ ಕರೆಯುತ್ತಿದ್ದರಂತೆ. 'ಶಿವಳ್ಳಿ' ಮೂಲಹೆಸರಿನ ಬಗೆಗೆ ಅನೇಕ ಐತಿಹ್ಯಗಳುಂಟು. ಪರುಶುರಾಮನ ಪರಮಭಕ್ತ ರಾಮಭೋಜ ರಾಜನು ಯಾಗಕ್ಕಾಗಿ ಭೂಮಿ ಉಳುವಾಗ ಸರ್ಪವೊಂದು ನೇಗಿಲಿಗೆ ಸಿಲುಕಿ ಮೃತವಾಗಲು, ಅಶ್ವಮೇಧಯಾಗಕ್ಕೆ ಕಳಂಕ ಬರಬಾರದೆಂಬ ಉದ್ದೇಶದಿಂದ ರಾಜನು ಪ್ರಾಯಶ್ಚಿತ್ತ ರೂಪವಾಗಿ ನಾಲ್ಕು ಮೂಲೆಗಳಲ್ಲಿ ನಾಲ್ಕು ನಾಗಾಲಯಗಳನ್ನು ಸ್ಥಾಪಿಸಿ ಮಧ್ಯದಲ್ಲಿ ಬೆಳ್ಳಿಯ ಪೀಠದಲ್ಲಿ ಅನಂತ ಪದ್ಮನಾಭ ಸ್ವಾಮಿಯನ್ನು ಲಿಂಗರೂಪದಲ್ಲಿ ಆರಾಧಿಸಿದನಂತೆ. ಅನಂತೇಶ್ವರನ ಪ್ರಾದುರ್ಭಾವ ರಾಮಭೋಜನ ಭಕ್ತಿಗೆ ಸಾಧನವಾಯ್ತು.

ದಕ್ಷ ಪ್ರಜಾಪತಿಯ ಶಾಪವಿಮೋಚನೆಗಾಗಿ ಚಂದ್ರನು ಅರಣ್ಯದಲ್ಲಿ ಪರಮೇಶ್ವರನನ್ನು ತಪಸ್ಸು ಮಾಡಿ, ಪ್ರಸನ್ನಗೊಳಿಸಿ ಶಾಪವಿಮೋಚನೆ ಹೊಂದಿದ ಪ್ರಾಚೀನೇತಿಹಾಸವಿದೆ. ಚಂದ್ರನು ತಪಗೈದ ಸ್ಥಳ ಇಂದು ಚಂದ್ರೇಶ್ವರ ದೇವಾಲಯವಾಗಿ ರೂಪುಗೊಂಡಿದೆ. ಚಂದ್ರನು ತಪಗೈದು ಸಿದ್ಧಿ ಪಡೆದ ತಾಣ (ಉಡು—ನಕ್ಷತ್ರ, ಪ=ಪಾಲಿಸುವವನು) ವಾಗಿ "ಉಡುಪಿ" ಎಂದು ಪರಿವರ್ತನೆ ಹೊಂದಿತು. 14 ನೇ ಶತಕದ ಗ್ರಂಥಕಾರ ನಾರಾಯಣ ಪಂಡಿತರು ರಜತಪೀಠಪುರ ವನ್ನು 'ಒಡಿಪು' ಎಂದು ಕರೆದ ಬಗ್ಗೆ ಉಲ್ಲೇಖವಿದೆ.

## ಶ್ರೀಮನ್ಮಧ್ವಾಚಾರ್ಯರು

ಉಡುಪಿಯ ಖ್ಯಾತಿಯು ವಿಶಿಷ್ಟ ಸ್ಥಾನಗಳಿಸಿ ಜಗದ್ವ್ಯಾಪಿಯಾಗಲು ಪ್ರಮುಖ ಕಾರಣಕರ್ತರು ಮನ್ಮಧ್ವಾಚಾರ್ಯರು. ಉಡುಪಿ ಸಮೀಪದ 'ಪಾಜಕಕ್ಷೇತ್ರ' ದ್ವೈತಮತ ಸ್ಥಾಪನಾಚಾರ್ಯ ಮಧ್ವಾಚಾರ್ಯರ ಜನ್ಮಭೂಮಿ. ನಡುಮನೆ ಮಧ್ಯಗೇಹಭಟ್ಟರ ಮನೆತನದ ನಾರಾಯಣ ಭಟ್ಟ ಮತ್ತು ವೇದಾವತಿ ದಂಪತಿಗಳ ಅನವರತ ಭಗವದಾರಾಧನೆಯಿಂದ ವಿಭೂತಿಪುರುಷ ಆಚಾರ್ಯ ಮಧ್ವರ ಜನನ. ಅವರ ಜನನ ಪೂರ್ವದಲ್ಲಿ ಹಿರಿಯರಿಗೆ ಮಹಾಪುರುಷನ ಅವತಾರದ ಕುರಿತು ದಿವ್ಯ ಸೂಚನೆಯಾಗಿತ್ತಂತೆ. ಕ್ರಿ. ಶ. 1238 ವಿಲಂಬಿ ಸಂವತ್ಸರ (ಶಾ॰ಶಕೆ 1160) ಆಶ್ವಯುಜ ವಿಜಯ ದಶಮಿಯ ಪರ್ವದಿನದಂದು ಮಧ್ವಾಚಾರ್ಯರ ಅವತಾರ. ಅವರ ಸನ್ಯಾಸಾಶ್ರಮಪೂರ್ವದ ಹೆಸರು ವಾಸುದೇವ.

ಸನಕಾದಿ ಪರಂಪರೆಯ ಅಚ್ಯುತ ಪ್ರೇಕ್ಷ ತೀರ್ಥರಿಂದ ಸನ್ಯಾಸದೀಕ್ಷೆ ಸ್ವೀಕರಿಸಿದ ವಾಸುದೇವ ಮಧ್ವಾಚಾರ್ಯರೆನಿಸಿ ಕೊಂಡರು. ಅವತಾರದ ಮೂಲ ಉದ್ದೇಶ ದ್ವೈತ ಶಾಸ್ತ್ರವನ್ನು ನಾಡಿನೆಲ್ಲೆಡೆ ಪಸರಿಸುವುದು. ಅವರು ಆಸೇತು ಹಿಮಾಚಲ ಯಾತ್ರೆ ಸಂಚಾರ ಕೈಗೊಂಡು ಪಂಡಿತ–ವಿದ್ವಾಂಸರೊಂದಿಗೆ ತರ್ಕ ನಡೆಸಿ ಧರ್ಮ ಪ್ರಚಾರದ ಪೌರೋಹಿತ್ಯ ವಹಿಸಿ ಯಶಸ್ವಿಯಾದರು. ಎರಡು ತೋರ್ಬೆರಳಿನ ಅವರ ದ್ವೈತಮತ ಸಿದ್ಧಾಂತ ಧರ್ಮಾನುಯಾಯಿಗಳಿಗೆ ಆಚರಣೆ ಅನುಸರಣೆಗೆ ಸರಳ, ಸುಲಭ, ಯೋಗ್ಯವೆನಿಸಿ ಸರ್ವಜನಾದರಣೀಯತೆ ಪಡೆಯಿತು. "ನಾರಾಯಣನೇ ಸರ್ವೋತ್ತಮನು" – ಮಧ್ವಾಚಾರ್ಯರ ಸಾಧನೆಯ ದಿವ್ಯ ಮಂತ್ರ. ಮಧ್ವಾಚಾರ್ಯರು ಬದರಿಕಾಶ್ರಮಕ್ಕೆ ತೆರಳಿ ಅಲ್ಲಿ ವೇದವ್ಯಾಸರ ದರ್ಶನ ಪಡೆದು ಕೃತಕೃತ್ಯರಾದರು.

ಆಚಾರ್ಯರು ಉಡುಪಿಯಲ್ಲಿ ಶ್ರೀಕೃಷ್ಣನ ಬಾಲವಿಗ್ರಹವನ್ನು ಪ್ರತಿಷ್ಠಾಪಿಸಿ ನಿತ್ಯ ಸೇವೆ, ಪೂಜೆ ನಿರಾತಂಕವಾಗಿ ಸಾಗುವಂತೆ ಅಷ್ಟಮಠಗಳನ್ನು ಸ್ಥಾಪಿಸಿ ಎಂಟು ಬಾಲಯತಿಗಳನ್ನು ನಿಯುಕ್ತಿಗೊಳಿಸಿದರು. ಮಠದ ಅಧಿಪತಿಗಳು ಅಂದಿನಿಂದ ಇಂದಿನವರೆಗೂ ಸರದಿಯಂತೆ ಶ್ರೀಕೃಷ್ಣ

ಶ್ರೀ ಶ್ರೀನಿವಾಸ ತಂತ್ರಿ



ಕಡೆಗೋಲು ಕೃಷ್ಣ

ನವಗ್ರಹ ಕಿಂಡಿ



ಪೂಜೆ, ಧರ್ಮಕಾರ್ಯ, ಧರ್ಮಪ್ರಚಾರ ನಡೆಸಿಕೊಂಡು ಬರುತ್ತಿದ್ದಾರೆ. ಧರ್ಮಪ್ರಚಾರ ಕಾರ್ಯ ನಿತ್ಯ ನಿರಂತರವಾಗಿ ಕಾರ್ಯ ಪ್ರವೃತ್ತವಾಗಲು ಮಧ್ವಾಚಾರ್ಯರು ಶಾಶ್ವತಯೋಜನೆಗಳನ್ನು ರೂಪಿಸಿದರು. ಮಧ್ವಾಚಾರ್ಯರು ದ್ವೈತ ಧರ್ಮ ತತ್ತ್ವವನ್ನು ಪ್ರತಿಪಾದಿಸುವ ಸುಮಾರು 37 ಮೂಲಾಧಾರ ಗ್ರಂಥಗಳನ್ನು ರಚಿಸಿದ್ದಾರೆ. ಬ್ರಹ್ಮ ಸೂತ್ರ–ಉಪನಿಷತ್‌ಗಳಿಗೆ ಭಾಷ್ಯ ಬರೆದರು. ಗೀತೆಗೆ ಟಿಪ್ಪಣಿ ಬರೆದರು. ಶ್ರೀಮದ್ಭಾಗವತ, ಮಹಾಭಾರತಗಳಿಗೆ ತಾತ್ಪರ್ಯ ನಿರ್ಣಯ ಬರೆದರು. ದ್ವಾದಶ ಸ್ತೋತ್ರ, ತಂತ್ರ ಸಾರಕೃತಿಗಳೇ ಮೊದಲಾಗಿ ಮಹತ್ವದ ಧರ್ಮ ಗ್ರಂಥಗಳನ್ನು ರಚಿಸಿದ್ದಾರೆ. ಶಾ. ಶಕ 1239 ಪಿಂಗಳ ಸಂ॥ ಮಾಘ ಶುದ್ಧ ನವಮಿಯಯಂದು ಇದ್ದಕ್ಕಿದ್ದಂತೆ ಬದರಿಕಾಶ್ರಮಕ್ಕೆ ತೆರಳಿ ಅದೃಶ್ಯರಾದರೆಂದು ಪ್ರತೀತಿ. ಆಚಾರ್ಯರು ಸರ್ವಜ್ಞಪೀಠದಲ್ಲಿ ಸನ್ನಿಹಿತರಾಗಿ ಪರ್ಯಾಯ ಶ್ರೀಗಳವರಿಗೆ ಮಾರ್ಗದರ್ಶನ ನೀಡುವರೆಂದು ನಂಬಿಕೆ.

## ಉಡುಪಿ ಶ್ರೀಕೃಷ್ಣ

ಉಡುಪಿಯಲ್ಲಿ ಶ್ರೀಕೃಷ್ಣನ ಪ್ರತಿಷ್ಠಾಪನೆಯ ಬಗೆಗೆ ವಿಭಿನ್ನ ದಂತ ಕಥೆಗಳಿವೆ. ದ್ವಾರಕೆಯಲ್ಲಿದ್ದ ಬಾಲಕೃಷ್ಣನ ಮೂಲವಿಗ್ರಹ ಕಾಲಾನುಕ್ರಮದಲ್ಲಿ ಗೋಪಿಚಂದನದ ಗಟ್ಟಿಯಲ್ಲಿ ಹುದುಗಲ್ಪಟ್ಟಿತು. ಸಾಮಾನು ತುಂಬಿದ ಹಡಗೊಂದು ದ್ವಾರಕೆಯಿಂದ ಸಾಗರತೀರದಲ್ಲಿ ದಕ್ಷಿಣಾಭಿಮುಖವಾಗಿ ಸಂಚರಿಸುತ್ತಿರಲು ಆಮಾಯಕ ರೀತಿಯಲ್ಲಿ ಆ ಗೋಪಿ ಚಂದನ ಹೆಂಟೆಯೂ ಹಡಗಿನಲ್ಲಿ ಸೇರಿರುತ್ತದೆ. ಉಡುಪಿಯಿಂದ ಮೂರು ಮೈಲು ಪಶ್ಚಿಮದ ಮಲ್ಪೆಯ ಸಮುದ್ರ ತೀರದಲ್ಲಿ ಹಡಗು ಸಾಗುತ್ತಿರಲು, ಒಮ್ಮಿಂದೊಮ್ಮೆಲೆ ತೂಫಾನಿಗೆ ಸಿಲುಕಿದಾಗ ವಡಭಾಂಡೇಶ್ವರದಲ್ಲಿ ಧ್ಯಾನಾಸಕ್ತರಾಗಿದ್ದ ಮಧ್ವಾಚಾರ್ಯರ ದಿವ್ಯಚಕ್ಷುಗಳಿಗೆ ಗೋಚರವಾಗಲು ತಮ್ಮ ಕಾವಿ ಶಾಟಿಯ ತುದಿಯ ಗಾಳಿಯಿಂದ ಹಡಗು ಸುರಕ್ಷಿತವಾಗಿ ದಡ ಸೇರಲು ಅನುಗ್ರಹಿಸಿದರು, ಇದರಿಂದ ಪ್ರಸನ್ನನಾದ ಹಡಗಿನ ಕಪ್ತಾನನು ಯತಿಗಳಿಗೆ ಭಕ್ತಿಯ ಕಾಣಿಕೆ ಸಮರ್ಪಿಸಲಪೇಕ್ಷಿಸಿದಾಗ ಆಚಾರ್ಯರು ಗೋಪಿಚಂದನದ ಗಟ್ಟಿಯೇ ಸಾಕೆಂದು ಸ್ವೀಕರಿಸಿದರು. ಅವರು ನಾವಿಕನಿತ್ತ ಗೋಪಿಚಂದನದ ಗಟ್ಟಿಯನ್ನೊಡೆದು ಅದರೊಳಗಿದ್ದ ಸಾಲಿಗ್ರಾಮ ಶಿಲೆಯ ಬಾಲಕೃಷ್ಣನ ಪ್ರತೀಕವನ್ನು ಉಡುಪಿಗೆ ತಂದು ಸರೋವರದಲ್ಲಿ ಶುದ್ಧೀಕರಿಸಿ ಮಠದೊಳಗೆ ಪ್ರತಿಷ್ಠಾಪಿಸಿದರು.

ಫಲಿಮಾರು ಮಠಾಧೀಶ ರಘುವರ್ಯ ತೀರ್ಥರ ಉಲ್ಲೇಖದಂತೆ–ದುರಂತಕ್ಕೆ ಸಿಲುಕಿದ ಹಡಗು ಗಾಳಿಯ ಸುಳಿಗೆ ಸಿಲುಕಿ ಬಂಡೆಗೆ ಒಡೆದು ನುಚ್ಚು ನೂರಾಗಲು ಎಲ್ಲವೂ ಕ್ಷಣಾರ್ಧದಲ್ಲಿ ಸಾಗರ ಗರ್ಭ ಸೇರಿತು. ಗೋಪೀ ಚಂದನದೊಳಗಿದ್ದ ಬಾಲಕೃಷ್ಣನ ವಿಗ್ರಹವೂ ಸಹ. ಹಲಕಾಲದ ಬಳಿಕ ಮಧ್ವಾಚಾರ್ಯರು ತತ್ತ್ವವಾದ ಪ್ರಚಾರಾರ್ಥ ಉಡುಪಿಗೆ ಆಗಮಿಸಿದಾಗ, ಒಂದು ದಿನ ಧ್ಯಾನಯೋಗದಿಂದ ಎಚ್ಚೆತ್ತು ಇದ್ದಕ್ಕಿದ್ದಂತೆ ತನ್ನ ಶಿಷ್ಯರೊಂದಿಗೆ ಮಲ್ಪೆಯತ್ತ ಪ್ರಯಾಣ ಬೆಳೆಸಿ ಏನೋ ಹೊಸ ಬೆಳಕು ಕಂಡಂತೆ ಕಡಲತೀರದಲ್ಲಿ ಮುಳುಗಿದ್ದ ಶ್ರೀಕೃಷ್ಣ ಮೂರ್ತಿಯನ್ನು ಗಸ್ತು ನೀರಿನಿಂದ ಬೇರ್ಪಡಿಸಿ ಉಡುಪಿಗೈತಂದು ಮಠದ ಸಮೀಪದ ಕೆರೆಯಲ್ಲಿ ಜಲಾಧಿವಾಸಗೊಳಿಸಿದರು. ಮಕರ ಸಂಕ್ರಮಣದ ಶುಭಮುಹೂರ್ತದಂದು ಶಿಷ್ಯ ಸಮೂಹದಿಂದ ಅಲುಗಿಸಲಾಗದ ಕೃಷ್ಣನ ಮೂರ್ತಿ ಆಚಾರ್ಯ ಮಧ್ವರ ಕರಸ್ಪರ್ಶದಿಂದ ಎದ್ದು ಬಂದು ಪವಾಡ ನಿರ್ಮಿಸಿದ. ಮಠದ ಗರ್ಭಗುಡಿಯಲ್ಲಿ ಶ್ರೀಕೃಷ್ಣನನ್ನು ನೆಲೆಗೊಳಿಸಿ ನಿತ್ಯ ಪೂಜೆಗೆ ವ್ಯವಸ್ಥೆಗೊಳಿಸಿದರು. ಆಚಾರ್ಯರು ಕೃಷ್ಣನನ್ನು ಮೀಯಿಸಿದ ಕೊಳ ಮಧ್ವ ಸರೋವರವಾಗಿಯೂ, ವಿಗ್ರಹ ಪ್ರತಿಷ್ಠಾಪಿಸಿದ ಮಠ ಕೃಷ್ಣಮಠವೆಂದೂ ಪ್ರಸಿದ್ಧಿಯಾಯಿತು. ಉಡುಪಿ ಕೃಷ್ಣನ ಪೂಜಾಧಿಕಾರ ಅಷ್ಟ ಮಠದ ಯತಿಗಳಿಗೆ ಮಾತ್ರ ಸೀಮಿತ. ಆಚಾರ್ಯರು 13ನೇ ಶತಕದ ಉತ್ತರಾರ್ಧದಲ್ಲಿ (ಕ್ರಿ. ಶ. 1238–1317) ಉಡುಪಿಯಲ್ಲಿ ಕೃಷ್ಣನನ್ನು ಪ್ರತಿಷ್ಠಾಪಿಸಿದ ಬಗೆಗೆ ಆಧಾರಗಳಿವೆ. ಏಳು ಶತಕಗಳಿಂದ ಬಾಲಕೃಷ್ಣ ಉಡುಪಿಯ ಆರಾಧ್ಯ ದೈವವಾಗಿ, ಭಕ್ತ ಭಾವುಕರಿಗೆ ಸಕಲ ಸನ್ಮಂಗಳವನ್ನೀವ "ಪೊಡವಿ ಗೊಡೆಯ" ನಾಗಿ ಜನ ಜನಿತನಾಗಿದ್ದಾನೆ.

ಕೃಷ್ಣಮಠ ಉಡುಪಿ ನಗರ ಮಧ್ಯಭಾಗದಲ್ಲಿದೆ. ಅನಂತೇಶ್ವರ–ಚಂದ್ರೇಶ್ವರ ಸನ್ನಿಧಿಯೂ ಸುತ್ತಲಲ್ಲಿ ಅಷ್ಟಮಠ–ಇತರ ಮಠಗಳೂ ಕಂಡು ಬರುತ್ತವೆ. ಪೂರ್ವದಿಂದ ಕ್ರಮಾಗತವಾಗಿ ಕಾಣಿಯೂರು, ಸೋದೆ, ಪುತ್ತಿಗೆ, ಅದಮಾರು, ಪೇಜಾವರ, ಫಲಿಮಾರು, ಕೃಷ್ಣಾಪುರ, ಶೀರೂರು, ಶ್ರೀಕೃಷ್ಣ ಮಠಗಳಲ್ಲದೆ ಉತ್ತರಾದಿ, ಭೀಮನಕಟ್ಟೆ, ರಾಘವೇಂದ್ರ ಮಠಗಳೂ ರಥ ಬೀದಿಗೆ ತಾಗಿಕೊಂಡಿವೆ.

## ಉತ್ಸವ ವಗೈರೆ

ಉಡುಪಿಯ ಕೃಷ್ಣನಿಗೆ ಭಕ್ತರ ಸೇವೆಯ ನಿತ್ಯೋತ್ಸವ. ನಿತ್ಯ ಮುಂಜಾನೆ, ಮಧ್ಯಾಹ್ನ, ರಾತ್ರಿ ವಿಧ್ಯುಕ್ತ ಪೂಜೆಗಳು ಕೃಷ್ಣನಿಗರ್ಪಿತ. ಕೃಷ್ಣಮಠದ ವಾಯುದೇವರು, ಮಧ್ವಾಚಾರ್ಯರು, ಭಾಗೀರಥಿ ಗುಡಿ, ಸುಬ್ರಹ್ಮಣ್ಯ ಗುಡಿಗಳಲ್ಲೂ ನಿತ್ಯಪೂಜೆ ವಿಧ್ಯುಕ್ತವಾಗಿ ನಡೆಯುತ್ತದೆ.

ಅಲ್ಲದೆ ಮಧ್ವನವಮಿ, ಶ್ರೀರಾಮನವಮಿ, ನರಸಿಂಹ ಜಯಂತಿ, ಭಾಗೀರಥೀ ಜನ್ಮದಿನ, ಕೃಷ್ಣಲೀಲೋತ್ಸವ, ಗಣೇಶ ಚತುರ್ಥಿ, ಅನಂತ ಚತುರ್ದಶಿ, ಸುಬ್ರಹ್ಮಣ್ಯ ಷಷ್ಠಿ, ನವರಾತ್ರಿ–ದಸರಾ, ಹೋಳಿ ಕಾಮದಹನ, ವಸಂತ ಪೂಜೆ, ಜಾಗರಸೇವೆ, ತುಲಸಿಪೂಜೆ, ಲಕ್ಷದೀಪೋತ್ಸವ, ಧನುಪೂಜೆ, ಮುಂತಾದ ಹಬ್ಬ ಹರಿದಿನಗಳಲ್ಲಿ ವಿಶೇಷ ಉತ್ಸವ, ಧಾರ್ಮಿಕ ಕಾರ್ಯಕಲಾಪಗಳು ನಡೆ

( 36ನೇ ಪುಟ ನೋಡಿ )

# ಶ್ರೀ ಪದ್ಮಾವತಿ ಅಮ್ಮನವರ ದೇವಾಲಯ

### ತಿರುಚಾನೂರು

ತಿರುಚಾನೂರು ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದಲ್ಲಿ ನಿತ್ಯಕುಂಕುಮಾರ್ಜನೆಯ ಶುಲ್ಕವನ್ನು ರೂ 150–00 ಗಳಿಗೆ ನಿಗಧಿಗೊಳಿಸಲಾಗಿದೆ, ಈ ಹೊಸ ಶುಲ್ಕ ಪದ್ಧತಿ ಈ ಕೂಡಲೇ ಜಾರಿಗೆ ಬಂದಿದ್ದು ಈ ಹಿಂದೆಯೇ ನಿತ್ಯಕುಂಕುಮಾರ್ಜನೆಯನ್ನು ಮಾಡಿಸಲು ಶುಲ್ಕ ಪಾವತಿ ಮಾಡಿರುವ ಗೃಹಸ್ಥರ ಕೈಂಕರ್ಯವನ್ನು ಹಿಂದಿನಂತೆಯೇ ಮುಂದುವರಿಸಲಾಗುವುದು. ಆಸಕ್ತ ಭಕ್ತರು ವಿವರಗಳಿಗೆ ಸ್ಥಳೀಯ ಪೇಷ್ಕಾರ್ ಅವರನ್ನು ವಿಚಾರಿಸಬಹುದು.

**ಪೇಷ್ಕಾರ್**

# ಸೌಂದರ್ಯಲಹರಿ

ವಿದ್ವಾನ್ ಬ. ನ. ಗುಂಡೂರಾವ್

ಓದು ಬರಹ ಬಲ್ಲವರೆಲ್ಲ ಕಾವ್ಯ ಸೌಂದರ್ಯವನ್ನು ಸವಿಯಲಾರರು. ಅದನ್ನು ಬೇರೊಬ್ಬರು ತೋರಿಸಿಕೊಟ್ಟಾಗ ಚೆನ್ನಾಗಿ ಅರ್ಥವಾಗುತ್ತದೆ. "ಪ್ರೋಕ್ತಾ ಅನ್ಯೇನೈವ ಸುಜ್ಞಾನಾಯ" ಎನ್ನುತ್ತದೆ ಕಠೋಪನಿಷತ್ತು. ಸೌಂದರ್ಯತತ್ತ್ವವನ್ನು ಕುರಿತು ವಿಮರ್ಶೆ ಮಾಡುವುದು ಮನಶ್ಶಾಸ್ತ್ರದ ಕೆಲಸವೇ ಅಥವ ತತ್ತ್ವಶಾಸ್ತ್ರದ ಕೆಲಸವೇ? ಪಾಶ್ಚಾತ್ಯರಲ್ಲಿ ಸೌಂದರ್ಯ ಮೀಮಾಂಸೆಯನ್ನು ಪ್ರಾರಂಭಮಾಡಿದವನು ಗ್ರೀಕ್ ತತ್ತ್ವಜ್ಞಾನಿ ಪ್ಲೇಟೊ. ನಮ್ಮ ಬುದ್ಧಿ, ರಾಗ ದ್ವೇಷ ರಹಿತವಾಗಿ, ಯಾವ ಲಾಭ ನಷ್ಟದ ಚಿಂತೆಯೂ ಇಲ್ಲದೆ, ಕೇವಲ ಶುದ್ಧ ದೃಷ್ಟಿಯಿಂದ ಕೂಡಿರುವಾಗ ಮಾತ್ರ ಸೌಂದರ್ಯ ಸಾಕ್ಷಾತ್ಕಾರ ಸಾಧ್ಯ. ಹೀಗೆ ತಲ್ಲೀನರಾಗಿ ನೋಡುವುದನ್ನು ಕೆಲವರುಧ್ಯಾನವೆಂದರು, ಕೆಲವರು ಉಪಾಸನೆ ಎಂದರು, ಕೆಲವರು ತಪಸ್ಸೆಂದರು. ವ್ಯಕ್ತಿಯನ್ನೇ ಆಗಲಿ, ವಸ್ತುವನ್ನೇ ಆಗಲಿ, ಋಷಿ ನೋಡುವ ರೀತಿಯಲ್ಲಿ ಕವಿ ನೋಡುವ ಧಾಟಿಯಲ್ಲಿ ನೋಡಿದರೆ ಸುಂದರವಾಗಿ ಕಾಣುತ್ತದೆ, ಅಲ್ಲಿ ಸೌಂದರ್ಯ ದರ್ಶನವಾಗುತ್ತದೆ ಎನ್ನುತ್ತಾನೆ ಪಾಶ್ಚಿಮಾತ್ಯ ಚಿನ್ತನಶೀಲ ಷೋಪೆನ್‌ಹಾರ್. ಹಾಗಾದರೆ ಸೌಂದರ್ಯವೆಂಬುದು ನಿಗೂಢ ತತ್ತ್ವವೇನು? ಸೌಂದರ್ಯವೆಂದರೆ ಯಾವುದು? ಕಣ್ಣಿಗೆ ಕಾಣುವುದೋ, ಮನಸ್ಸಿಗೆ ಗೋಚರವಾಗುವುದೋ ಅಥವ ಹೃದಯಕ್ಕೆ ಭಾಸವಾಗುವುದೋ? ಮನೋಭಾವಗಳು ಬದಲಾದಂತೆಲ್ಲ ಸೌಂದರ್ಯದ ಕಲ್ಪನೆಯೂ ವ್ಯತ್ಯಾಸವಾಗಬಹುದು. ಸತ್ಯಂ ಶಿವಂ ಸುಂದರಂ — ಎಂಬ ಮಾತು ನೆನಪಿಗೆ ಬಂದಾಗ, ನಮ್ಮ ಹಿರಿಯರು ಸೌಂದರ್ಯವನ್ನು ಸತ್ಯ ಶಿವಗಳ ಸಾಲಿನಲ್ಲಿ ಪ್ರತಿಷ್ಠಿತಗೊಳಿಸಿದ್ದಾರೆನ್ನಿಸುತ್ತದೆ. ವಸ್ತುತಃ ಈ ಮೂರೂ ಅಭಿನ್ನ ತತ್ತ್ವಗಳೇ ಆಗಿವೆ. ಸುಂದರವಾದ ವ್ಯಕ್ತಿಯನ್ನು ಧಾರ್ಮಿಕ ಹಾಗೂ ಪೂಜ್ಯಭಾವನೆಯಿಂದ ನೋಡಿದಾಗ ನಿಂದ್ಯವಾಗುವುದಿಲ್ಲ. ನಾವು ಮಾಡುವ ಕಾರ್ಯ, ಆಡುವ ಮಾತು, ನೋಡುವ ನೋಟ ಯಾವುದೂ ಧರ್ಮಬಾಹಿರವಾಗಿರಬಾರದು; ಧರ್ಮ ವಿರುದ್ಧವಾಗಿರಬಾರದು. ಧರ್ಮ ವಿರುದ್ಧವಾದುದೆಲ್ಲ ನಿಂದ್ಯ, ಧರ್ಮ ಸಮ್ಮತವಾದುದೆಲ್ಲ ವಂದ್ಯ ಹಾಗೂ ಪೂಜ್ಯ.

ಪ್ರಕೃತಿಪುರುಷ, ಶಿವಶಕ್ತಿ–ಇವು ಅಭಿನ್ನ ತತ್ತ್ವಗಳು. ಅರ್ಧನಾರೀಶ್ವರನ ಕಲ್ಪನೆ, ಈ ಸಿದ್ಧಾಂತಕ್ಕೆ ಪುಷ್ಟಿನೀಡುತ್ತದೆ. ಕಾಳಿದಾಸ "ಜಗತಃ ಪಿತರೌ ವನ್ದೇ"- ಎಂದಾಗ ಈ ಜಗನ್ಮಾತಾಪಿತರು ಯಾರು? ಶಿವಶಕ್ತಿಯರೇ, ಪ್ರಕೃತಿಪುರುಷರೇ? ಬ್ರಹ್ಮವಸ್ತುವನ್ನು ಯಾವ ಹೆಸರಿನಲ್ಲಿ ಬೇಕಾದರೂ ಪೂಜಿಸಬಹುದು–ಕರೆಯಬಹುದು. ಸೃಷ್ಟಿಗೆ ಉಪಾದಾನ ಕಾರಣವೂ, ನಿಮಿತ್ತಕಾರಣವೂ ಬ್ರಹ್ಮವಸ್ತುವೇ ಆಗಿದೆ – ಎಂಬ ಮಂತ್ರದ್ರಷ್ಟಾರರ ಅಭಿಪ್ರಾಯ ನೋಡಿದಾಗ, ಜಗತ್ತಿಗೆ ತಂದೆಯೂ ತಾಯಿಯೂ ಪರಬ್ರಹ್ಮ ವಸ್ತುವೇ ಆಗಿದೆ; ಉಪಾಧಿ ಶರೀರಗಳ ಭಿನ್ನತೆಯಿಂದಾಗಿ, ಅದು ಸ್ತ್ರೀ ಪುರುಷರೆಂಬ ಹೆಸರು ಪಡೆದಿದೆ—ಎಂಬುದು ಸ್ಪಷ್ಟಪಡುತ್ತವೆ. ನಾಮರೂಪಗಳನ್ನು ಪಡೆದಿರುವ ಬ್ರಹ್ಮವಸ್ತು, ವಸ್ತುತಃ ನಿರ್ಗುಣ, ನಿರಾಕಾರ, ಶುದ್ಧ, ಸತ್ಯ, ಜ್ಞಾನ, ಅನಂತ–ಎಂಬುದು ಉಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಸತ್ಯ.

ಯಾವುದೇ ಕಾರ್ಯವಾಗಬೇಕಾದರೂ ಶಕ್ತಿ ಅತ್ಯಗತ್ಯ ಎಂಬುದು ವೈಜ್ಞಾನಿಕ ಸತ್ಯ. ಶಕ್ತಿಗೆ ಶಕ್ತಿಯನ್ನು ಯಾರೂ ಕೊಡಬೇಕಾದ್ದಿಲ್ಲ. ಆದ್ದರಿಂದಲೇ ಶಾಕ್ತೇಯ ಪಂಥದಲ್ಲಿ "ಶಕ್ತಿಃ ಸತ್ಯಸ್ವರೂಪಿಣೀ" ಎಂಬ ಮಾತು ಬಳಕೆಯಲ್ಲಿದೆ. ಶಕ್ತಿಗೆ ಅತ್ಯಂತ ಮಹತ್ವವಿರುವುದರಿಂದ, ಅದು ಆರಾಧ್ಯ ವಸ್ತುವಾಯ್ತು. ಭಾರತೀಯ ಪರಂಪರೆಯಲ್ಲಿ ಶಕ್ತಿಪೂಜೆ ಹೊಸದೇನೂ ಅಲ್ಲ. 'ಮಾತಾ ಪೂರ್ವರೂಪಂ ಪಿತಾ ಉತ್ತರರೂಪಂ' ಎನ್ನುತ್ತದೆ ತೈತ್ತರೀಯ ಶ್ರುತಿ. ಋಗ್ವೇದದಲ್ಲಿ ಬರುವ — ದೇವೀಸೂಕ್ತ – ಶಕ್ತ್ಯಾರಾಧನೆಯ ಪ್ರಾಚೀನತೆಗೆ ಸಮುಜ್ಜ್ವಲ ಸಾಕ್ಷಿಯಾಗಿದೆ.

ಸಾಮಾನ್ಯವಾಗಿ ಮಕ್ಕಳಿಗೆ, ತಂದೆಗಿಂತಲೂ ತಾಯಿಯಲ್ಲಿ ಹೆಚ್ಚು ಆತ್ಮೀಯತೆ, ಸಲಿಗೆ ಎಂಬುದು ನಿರ್ವಿವಾದ ಸಂಗತಿ. ಬಹುಶಃ ಈ ಕಾರಣದಿಂದಲೇ ಮಾತೃಪೂಜಾವಿಧಾನ, ದೇವೀಪೂಜಾವಿಧಾನ ಬಳಕೆಗೆ ಬಂತೆಂದರೂ ತಪ್ಪಿಲ್ಲ. ತ್ವಮೇವ ಮಾತಾ ಚ ಪಿತಾ ತ್ವಮೇವ - ಎಂಬ ಮಾತಿನ ಔಚಿತ್ಯವನ್ನು ಗಮನಿಸಿದಾಗ, ಆರಾಧನೆ ಯಾವುದೇ ರೂಪದಲ್ಲಾದರೂ ಬಾಧಕವಿಲ್ಲವೆಂಬ ಅಂಶ ಸ್ಪಷ್ಟವಾಗುತ್ತದೆ. ಪಿತಾಃ ಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ—ಎಂಬ ಗೀತಾವಾಕ್ಯವೂ ಸಹ ಇದನ್ನೇ ಧ್ವನಿಪೂರ್ಣವಾಗಿ ಸಾರುತ್ತದೆ.

ಪರಮಪೂಜ್ಯರಾದ ಶಂಕರ ಭಗವತ್ಪಾದರು ಮಾತೃತ್ವಕ್ಕೆ ಮಹತ್ವ ಕೊಟ್ಟು, ಯಾವ ಚಿನ್ಮಯ ಭಗವತಿಯ ದಿವ್ಯವರ್ಣನೆ ಮಾಡಿದ್ದಾರೋ,ಭವ್ಯವಿವರಣೆ ನೀಡಿದ್ದಾರೋ, ಆಕೆ ಜಗದ್ಧಾತೃ ಶಕ್ತಿ. "ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ, ನಮಸ್ತಸ್ಯೈ ನಮೋ ನಮಃ" ಎಂದು ದುರ್ಗಾಸಪ್ತಶತಿ ಹಾಡಿ ಹೊಗಳಿರುವುದು ಸಹ ಇದೇ ಜಗದ್ಧಾತ್ರಿಯನ್ನು – ಆಕೆಯನ್ನೇ ಪ್ರಧಾನವಾಗೆಣಿಸಿ ಆರಾಧಿಸುವವರು ಶಾಕ್ತೇಯರು. ಲೋಕವೆಲ್ಲ ಈ ತಾಯಿಯ ಕರುಣೆಯಿಂದಲೇ ಬದುಕಬೇಕು. ಜನ್ಮ ಪಡೆದ ಪ್ರತಿ ಜೀವವೂ ಪ್ರಪ್ರಥಮವಾಗಿ ಉಚ್ಚರಿಸುವುದು- ಅಂಬಾ - ಅಮ್ಮ -ಎಂದು. ಲಲಿತಾ ಸಹಸ್ರ ನಾಮದಲ್ಲಿ ಮೊದಲನೆ ಮಾತೇ ಶ್ರೀ ಮಾತಾ—ಎಂದಿದೆ!!.

ಭಗವತ್ಪಾದರು, ನೂರಾರು ದಿವ್ಯ ಕೃತಿಗಳನ್ನು ಜಗತ್ತಿಗೆ ಕೊಟ್ಟು ಹೋಗಿದ್ದಾರೆ. ಅದರಲ್ಲಿ ಒಂದು "ಆನಂದಲಹರಿ", ಇನ್ನೊಂದು "ಸೌಂದರ್ಯಲಹರಿ" ಸೌಂದರ್ಯ-ಆನಂದ - ಇವು ಒಂದೇ ನಾಣ್ಯದ ಎರಡು ಮುಖಗಳು. ಒಂದಕ್ಕೊಂದು ಪೂರಕ, ಪ್ರೇರಕ. ಜಗನ್ಮಾತೆ ಶಂಕರಿಯೂ ಹೌದು. ಭಯಂಕರಿಯೂ ಹೌದು, ಆರ್ತಜನ ಅಭಯಂಕರಿಯೂ ಹೌದು. ಶಂಕರರು ಭಗವಂತನನ್ನು ವಿಶ್ವನಾಥ, ವಿಶ್ವಮಾತೆ— ಎರಡೂ ರೂಪದಲ್ಲಿ ಕಂಡಿದ್ದಾರೆ.

"ಸೌಂದರ್ಯಲಹರಿ"–ನೂರು ಶ್ಲೋಕಗಳಲ್ಲಡಕವಾಗಿದೆ. ಇದು ಮಾಲಿಕೆ-ರತ್ನಮಾಲಿಕೆ; ರಾಗರತ್ನಮಾಲಿಕೆ–ಶತರಾಗರತ್ನಮಾಲಿಕೆ. ಈ ಗ್ರಂಥದ ವಿಶ್ಲೇಷಣೆಯನ್ನು ಎರಡು ರೀತಿಯಲ್ಲಿ ಮಾಡಲವಕಾಶವಿದೆ. ಒಂದು ಮಂತ್ರಶಾಸ್ತ್ರ, ತಂತ್ರಶಾಸ್ತ್ರದ ದೃಷ್ಟಿಯಿಂದ; ಇನ್ನೊಂದು ಕಾವ್ಯಮಯ ದೃಷ್ಟಿಯಿಂದ; ಭಕ್ತಿಸೌಂದರ್ಯದ ದೃಷ್ಟಿಯಿಂದ. ಹೆಸರೇ ಸೂಚಿಸುವಂತೆ ಇದು ಅಚಿನ್ತ್ಯ, ಅಪಾರ, ಅಗಮ್ಯ. ದೈವೀ ಸೌಂದರ್ಯದ ಭೂಮಾನುಭವದಿಂದ ಪ್ರೇರಿತವಾಗಿದೆ.

ಸೌನ್ದರ್ಯಲಹರಿ — ಎಂತಹ ಧ್ವನಿಪೂರ್ಣ ಶಬ್ದಪ್ರಯೋಗ!! ದೈವೀ ಸೌಂದರ್ಯವನ್ನದರ ಸಮಗ್ರ-ಸಂಪೂರ್ಣ ರೂಪದಲ್ಲಿ ಕಂಡವರು ಅತಿವಿರಳ.

ತ್ವದೀಯಂ ಸೌಂದರ್ಯಂ ತುಹಿನಗಿರಿ
ಕನ್ಯೇ ತುಲಯಿತುಂ
ಕವೀಂದ್ರಾಃ ಕಲ್ಪಂತೇ ಕಥಮಪಿ
ವಿರಿಂಚಿ ಪ್ರಭೃತಯಃ ||

ಹಿಮಾದ್ರಿಸುತೇ - ನಿನ್ನ ಸೌಂದರ್ಯವನ್ನು ಬಣ್ಣಿಸಲು ಬ್ರಹ್ಮನೇ ಮೊದಲಾಗಿ ಉಳಿದೆಲ್ಲ ಕವೀಂದ್ರರೂ ಹೇಗೆ ತಾನೆ ಸಮರ್ಥರಾದಾರು — ಎಂದಿರುವ ಭಗವತ್ಪಾದರು ಒಂದು ಕಡೆ ಹೇಳುತ್ತಾರೆ.

ತ್ವದನ್ಯಃ ಪಾಣಿಭ್ಯಾಮ
ಭಯವರದೋ ದೈವತಗಣಃ
ಶರಣ್ಯೇ ಲೋಕಾನಾಂ
ತವ ಹಿ ಚರಣಾವೇವ ನಿಪುಣೌ ||

ನಿನ್ನ ವಿನಃ ಉಳಿದೆಲ್ಲ ದೇವತೆಗಳೂ ಕೈಯಿಂದ ಅಭಯದಾನ ನೀಡುತ್ತಾರೆ. ಆದರೆ ನಿನ್ನ ಪಾದ ಪದ್ಮಗಳೇ ಸಾಕು - ಅಭಯ, ಅನುಗ್ರಹ ನೀಡುವ ಸಾಮರ್ಥ್ಯವನ್ನು ಪಡೆದಿವೆ. ಏಕೆಂದರೆ ನೀನು ಪ್ರಣತ ಜನ ಸೌಭಾಗ್ಯ ಜನನಿ.

ಕೃಪೆಯಾಗಲೂ ಪಾದಗಳ ಮೂಲಕವೇ ಇಳಿದು ಬರುತ್ತದೆ. ಆದ್ದರಿಂದಲೇ ಪಾದಾಭಿವಂದನ ಪದ್ಧತಿ ಜಾರಿಯಲ್ಲಿದೆ. ಪಾದಗಳೂಬೇಡ; ಅದರ ಪಾವನ ಸ್ಪರ್ಶದಿಂದ ಪುನೀತವಾದ ಪಾದುಕೆಗಳೇ ಸಾಕು- ಪರಮಾನುಗ್ರಹದಾಯಕವಾಗುತ್ತವೆ ಎಂದು ಭಾವಿಸಿದ ಇಕ್ಷ್ವಾಕುವಂಶಾವತಂಸ ಭರತನನ್ನು ಸ್ಮರಿಸಿಕೊಂಡಾಗ ಪುಲಕಿತನಾಗದಿರುವ ಸಹೃದಯ ವ್ಯಕ್ತಿ ತುಂಬ ದುರ್ಲಭ!!

ಜಗನ್ಮಾತೆಯ ಅನಿಂದ್ಯ ಸೌಂದರ್ಯ, ಬಣ್ಣನೆಗೆ ಮೀರಿದ್ದು. ಯಾರೆಷ್ಟು ವರ್ಣಿಸಿದರೂ ಸಾಲದು. ತಾಯಿಯ ಸೌಂದರ್ಯವನ್ನು ವರ್ಣಿಸುವುದು ಸೂಕ್ತವೇ?—ಎಂದು ಕೇಳುವವರೂ ಇದ್ದಾರೆ. ಅಂತಹವರಿಗೊಂದು ಮರು ಪ್ರಶ್ನೆ ಇದೆ—ಹಾಗಾದರೆ ಯಾರ ಸೌಂದರ್ಯವನ್ನು ಬಣ್ಣಿಸುವುದು ಸೂಕ್ತ? ಸೌಂದರ್ಯವರ್ಣನೆ ಎಂದರೆ ಸ್ತ್ರೀ ಸೌಂದರ್ಯವರ್ಣನೆ - ಎಂದೇ ಸಾಮಾನ್ಯ ಅಭಿಪ್ರಾಯ. ಸ್ತ್ರೀ ರೂಪಮೆ ರೂಪಂ ಶೃಂಗಾರಮೆ ರಸಂ - ಎಂಬ ಕವಿವಾಣಿ ಗಾದೆಯ ಮಾತಾಗಿ ಹೋಗಿದೆ. ಸೌಂದರ್ಯವೆಂಬುದು ದೃಗ್ಗೋಚರವಾದ ಸ್ಥೂಲ ದೇಹಾತ್ಮಕವಾದದ್ದೇ? ಅಥವ ಅನ್ತರಂಗಕ್ಕೆ ಭಾಸವಾಗುವ ಭಾವಾತ್ಮಕ ಸ್ವರೂಪವೇ? ಸುಂದರತೆಯಾನಂದ ಅಮರ - ಎಂದ ಕೀಟ್ಸ್ ಕವಿಯ ಅಭಿಪ್ರಾಯವೇನು? ಸಾಹಿತ್ಯದಲ್ಲಿ ಈ ಎರಡೂ ಬಗೆಯ ದೃಷ್ಟಿಯಿಂದ ವರ್ಣನೆಗಳಿವೆ. ಒಂದು ಪ್ರಚೋದಕ; ಒಂದು ಪ್ರಬೋಧಕ. ಒಂದು ಮಾರಕ; ಒಂದು ತಾರಕ. "ಸೌಂದರ್ಯಲಹರಿ"—ಯಲ್ಲಿ ಶ್ರೀ ಮಾತೆಯ ನಖಶಿಖಾಂತ ವರ್ಣನೆ ಇದೆ. ಇದು ಶಂಕರ ಸಾಹಿತ್ಯದಲ್ಲಿ ಮೂರ್ಧನ್ಯಸ್ಥಾನ ಪಡೆದು ಕಾವ್ಯಗುಣಗಳಿಂದ ಪರಿಶೋಭಿಸುವ ಕೃತಿರತ್ನ.

ಭಗವತ್ಪಾದರು ಈ ಗ್ರಂಥದ ಪ್ರಥಮ ಕವಿತೆಯಲ್ಲಿ "ಜಾಯಾಪತಿನ್ಯಾಯ"ದಂತೆ ಶಿವಶಕ್ತಿಯರ ವಿವರಣೆ ಕೊಡುತ್ತ ಒಂದು ಹಂತದಲ್ಲಿ ಸೃಷ್ಟಿ ಸ್ಥಿತಿಲಯ ಕಾರ್ಯಗಳನ್ನು ನಿರ್ವಹಿಸುವಂತಹ ದೇವತೆಗಳೂ ಸಹ ಶ್ರೀ ಮಾತೆಯ ಅರುಣ ಚರಣರೇಣು ಮಹಿಮೆಯಿಂದಲೇ ತಂತಮ್ಮ ಕರ್ತವ್ಯಗಳನ್ನು ನಡೆಸುವ ಸಾಮರ್ಥ್ಯವನ್ನು ಪಡೆದಿದ್ದಾರೆಂದು ಅಭಿಪ್ರಾಯ ಪಟ್ಟಿದ್ದಾರೆ. ಆಕೆಯ ಶ್ರೀಪಾದರೇಣುವಿಗೆಂತಹ ಶಕ್ತಿ ಇದೆ?— ಅದು ಜಡಜೀವಿಗಳಿಗೆ "ಚೈತನ್ಯಸ್ತಬಕ ಮಕರಂದ ಸ್ರುತಿಝರಿ"—ಯಂತೆ; ದರಿದ್ರಜೀವಿಗಳಿಗೆ ಸಕಲ ಭಾಗ್ಯದಾಯಕ ಚಿಂತಾಮಣಿಯಂತೆ; ಜನ್ಮ ಜಲಧಿ ನಿಮಗ್ನರಿಗೆ ತಾರಕ ಸಾಮಗ್ರಿಯಂತೆ; ಅಜ್ಞಾನಿಗಳಿಗೆ ಜ್ಞಾನದಾಯಕ ವಸ್ತುವಂತೆ !!

ಸುಂದರ ಸುರಭಿತಸುವಿಕಸಿತ ಪುಷ್ಪಗಳೇ ಬಿಲ್ಲು; ಭ್ರಮರ ಸಮೂಹವೇ ಆ ಬಿಲ್ಲಿನ ಹಗ್ಗ, ಆ ಬಿಲ್ಲಮೇಲೆ ಹೂಡಲು ಐದು ಬಾಣಗಳು—ಈ ವಿಚಿತ್ರ ಧನುರ್ಧಾರಿ ಯಾರು? ಲೋಕ ಮೋಹಕ ಲಾವಣ್ಯ ಮೂರ್ತಿಯಾದ ಮನ್ಮಥ. ಈತನಿಗೊಬ್ಬ ಸಚಿವನಂತೆ—ಸಾಮಂತನಂತೆ – ವಸನ್ತ!! ಸುಖಸ್ಪರ್ಶನೀಡಿ ಪುಲಕಿತಗೊಳಿಸುವ ದಕ್ಷಿಣಾನಿಲ – ಮಲಯಮಾರುತ, ಇವನೇರುವ ತೇರಂತೆ!! ಸೌಂದರ್ಯವೇ ಸಾಕಾರವಾದ ಮನಮೋಹಕ ವಿಗ್ರಹವಲ್ಲವೇ- ಮನ್ಮಥ. ಈತನಿಗೆ ಈ ಲೋಕಮೋಹಕ ಸೌಂದರ್ಯ ಹೇಗೆ ಬಂತು? ಯಾರ ಕೃಪೆಯ ಫಲವದು? ಶ್ರೀಮಾತೆಯ ಕಡೆಗಣ್ಣ ನೋಟದ ಫಲವಂತೆ!! ಜಗನ್ಮಾತೆಯ ಕೃಪಾದೃಷ್ಟಿಗೆ ಪಾತ್ರನಾಗಲು, ಇಕ್ಷುಕೋದಂಡಪಾಣಿ ತುಂಬ ತಪಸ್ಸುಮಾಡಿರಬೇಕು!! ಮನ್ಮಥನಿಗೆ ಲಾವಣ್ಯ ನೀಡಿದ ಆಕೆಯ ಲಾವಣ್ಯವೆಷ್ಟಿರಬೇಕು!! ಆಕೆಯ ವಾತ್ಸಲ್ಯವೆಷ್ಟಿರಬೇಕು!! ಆಕೆ ಸೌಂದರ್ಯ ಜಲಧಿ; ವಾತ್ಸಲ್ಯ ಶರಧಿ, ಲಾವಣ್ಯ

(35ನೇ ಪುಟ ನೋಡಿ)

# ಗೀತಾ ಮಹಾತ್ಮೆ

( ಮುಂದುವರೆದದ್ದು )

ನಾಲ್ಕನೆಯ ಅಧ್ಯಾಯದಲ್ಲಿ ಭಗವಂತನು ಅರ್ಜುನನಿಗೆ ಜ್ಞಾನಯೋಗದ ಮಹಾತ್ಮೆಯನ್ನು ಹೇಳುತ್ತಾನೆ.

ಯದಾ ಯದಾ ಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಂ ಅಧರ್ಮಸ್ಯ
ತದಾಽತ್ಮಾನಂ ಸೃಜಾಮ್ಯಹಂ ॥

ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಂ ।
ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ ॥

ಎಂಬ ಅಭಯ ಹಸ್ತದ ಭರವಸೆ ಈ ಅಧ್ಯಾಯದಲ್ಲಿ ಇದೆ. ಈ ಸ್ವಾಮಿಯ ಮಾತೇ ಯುಗ ಯುಗಾಂತರಗಳಿಂದ ಭಕ್ತರಿಗೆ ಒಂದು ಸಂಜೀವಿನಿಯಾಗಿದೆ, ಆಸರೆಯಾಗಿದೆ. ಧರ್ಮಕ್ಕೆ ಚ್ಯುತಿ ಬಂದಾಗ ಅಧರ್ಮ ಹೆಚ್ಚಿದಾಗ, ತಾನೇ ಧರ್ಮ ಪರಿಪಾಲನೆಗೆ ಸಜ್ಜನರ ಪಾಲನೆಗೆ ಅವತಾರ ಮಾಡುತ್ತೇನೆ ಎಂಬುದಾಗಿ ಹೇಳಿದ್ದಾನೆ.

ಯೇ ಯಥಾ ಮಾಂ ಪ್ರಪದ್ಯಂತೇ
ತಾಂ ಸ್ತಥೈವ ಭಜಾಮ್ಯಹಂ ।
ಮಮ ವರ್ತ್ಮಾನುವರ್ತಂತೇ
ಮನುಷ್ಯಾಃ ಪಾರ್ಥ ಸರ್ವಶಃ ॥

ಯಾರು ಯಾರು ಯಾವ ಯಾವ ಪ್ರಕಾರ ನನ್ನನ್ನೇ ಭಜಿಸುವರೋ ಅವರಿಗೆ ಆಯಾಪ್ರಕಾರ ಅನುಗ್ರಹ ಮಾಡುತ್ತೇನೆ ಎಂಬುದಾಗಿ ತಿಳಿಸುತ್ತಾನೆ. ಈಶ್ವರ ಅರ್ಪಿತವಾದ ಕರ್ಮವು ಬಂದನವಾಗುವುದಿಲ್ಲ, ಬ್ರಹ್ಮಾರ್ಪಣವಾದ ಕರ್ಮವು ಜ್ಞಾನ ಯೋಗದ ಲಕ್ಷಣ. ನಿರಂತರ ತನ್ನ ವರ್ಣಕ್ಕೆ ತಕ್ಕ ಕರ್ಮವನ್ನು ಮಾಡುತ್ತಾ ಈಶ್ವರ ಪ್ರೀತ್ಯರ್ಥ ಮಾಡುವ ಕರ್ಮ ಜ್ಞಾನವೈರಾಗ್ಯ ಸಿದ್ಧಿ. ಜ್ಞಾನಯಜ್ಞದಿಂದ ಮಾಡುವ ಕರ್ಮ ಬಹು ಪವಿತ್ರವಾದುದು. ವೇದಶಾಸ್ತ್ರ ಸ್ಮೃತಿ ಪುರಾಣ ಉಪನಿಷತ್ತುಗಳಲ್ಲಿ ಹೇಳಿರುವ ತತ್ತ್ವವನ್ನು ತಿಳಿದು ತನ್ನಿಷ್ಠರಾಗಿ, ಜ್ಞಾನವೆಂಬ ಹಣತೆಯಲ್ಲಿ ಕರ್ಮವೆಂಬ ಬತ್ತಿಯನ್ನು ಅದ್ದಿ ತಪಸ್ಸೆಂಬ ಎಣ್ಣೆಯಲ್ಲಿ ಮಿಂದರೆ ಅದೇ ಜ್ಞಾನ ಯಜ್ಞ. ಸ್ವಾಮಿಯು 4ನೇಯ ಅಧ್ಯಾಯ 28ನೇ ಶ್ಲೋಕದಲ್ಲಿ;

ದ್ರವ್ಯ ಯಜ್ಞಾಸ್ತಪೋಯಜ್ಞಾ
ಯೋಗಯಜ್ಞಾಸ್ತಥಾಪರೇ ।
ಸ್ವಾಧ್ಯಾಯ ಜ್ಞಾನಯಜ್ಞಾಶ್ಚ
ಯತಯಃ ಸಂಶಿತವ್ರತಾಃ ॥

ಎಂಬುದಾಗಿ ತಿಳಿಸುತ್ತಾ ವಿವಿಧವಾದ ಜ್ಞಾನ ಯಜ್ಞಗಳ ಪರಿಚಯ ಮಾಡಿಸುತ್ತಾನೆ. ಆ ಯಜ್ಞಗಳನ್ನು ಆಚರಿಸುವಾಗ ಕರ್ಮಗಳ ಫಲಾಪೇಕ್ಷೆ ಇಲ್ಲದಿದ್ದರೆ ಕರ್ಮ ಬಂಧನದಿಂದ ಮುಕ್ತನಾಗುತ್ತಾನೆ ಪಾಮರ.

ತದ್ವಿದ್ಧಿ ಪ್ರಣಿಪಾತೇನ
ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ
ಜ್ಞಾನಿನಃ ತತ್ತ್ವದರ್ಶಿನಃ ॥

ಭವ ಬಂಧನದಿಂದ ಮುಕ್ತನಾಗಬೇಕಾದರೆ ಕರ್ಮವನ್ನು ಭಗವದಾರಾಧನವೆಂದು ತಿಳಿದು ಮಾಡಬೇಕು. ಎಲ್ಲ ಕರ್ಮಗಳ ಫಲವೂ ಜ್ಞಾನ ಯೋಗದಲ್ಲಿ ಪರಿ ಸಮಾಪ್ತಿಯಾಗುವ ಕಾರಣ. ಅಂದರೆ ಕರ್ಮಗಳು ಪರಿಸಮಾಪ್ತಿ ಹೊಂದುವುದು ಭೋಗದಲ್ಲಲ್ಲ, ಫಲದಲ್ಲಲ್ಲ ಜ್ಞಾನದಲ್ಲಿ. ಕರ್ಮ ಜ್ಞಾನ ಭಕ್ತಿಯೇ ಅತಿ ಶ್ರೇಷ್ಠವಾದುದು.

ಅದನ್ನು ತಿಳಿಯ ಬೇಕಾದರೆ ತತ್ತ್ವ ಜ್ಞಾನಿಗಳ ಅಡಿದಾವರೆಗಳಲ್ಲಿ ಸೇವೆ ಮಾಡಿ ಪರಿಪ್ರಶ್ನಗಳನ್ನು ಮಾಡಿ ಉಪದೇಶವನ್ನು ಹೊಂದಿ ಆ ಆತ್ಮಜ್ಞಾನದಿಂದ ಸಮಸ್ತ ಚರಾಚರಗಳು ಭಗವಂತನ ಅಂಶವೆಂದು ತಿಳಿದು ಜ್ಞಾನಾಗ್ನಿಯಿಂದ ಸಮಸ್ತ ಕರ್ಮಗಳನ್ನು ಸುಟ್ಟು ಶುದ್ಧನಾಗಿ ಪರಮಾತ್ಮನನ್ನು ಸೇರಬೇಕು. ಆದ್ದರಿಂದಲೇ ಭಗವಂತನು ನಾಲ್ಕನೆಯ ಅಧ್ಯಾಯದಲ್ಲಿ ಪದೇ ಪದೇ 'ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ' ಮತ್ತು 'ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ' ಎಂಬುದಾಗಿ ಘೋಷಿಸಿದ್ದಾನೆ. ಮನಸ್ಸು ಅಸ್ತವ್ಯಸ್ತವಾಗಿ 'ಕಿಮ ಕುರ್ವತ' ಎಂಬ ಸಂಶಯ ತಲೆದೋರಿದಾಗ ಮಾನವನು ಸಮಚಿತ್ತನಾಗಿ ಸದಾಕಾಲದಲ್ಲಿ ಕರ್ಮವನ್ನು ಯಜ್ಞವೆಂದು ತಿಳಿದು ಮಾಡುತ್ತಾ ಇದ್ದರೆ ಕರ್ಮ ಬಂಧನಕ್ಕೆ ಒಳಗಾಗುವುದಿಲ್ಲ, ಮನಸ್ಸನ್ನು ಸಮಚಿತ್ತಕ್ಕೆ ತರಬೇಕಾದರೆ ಒಂದು ಸುಲಭವಾದ ಮಾರ್ಗ ಭಕ್ತಿ ಮಾರ್ಗ. ಭಕ್ತಿಗೆ ಧ್ಯಾನ ಸಾಧನೆ ಅಭ್ಯಾಸ ಅಂಗಗಳು. ಭಗವದ್ಗೀತೆಯಲ್ಲಿ ಕರ್ಮಯೋಗ ಜ್ಞಾನ ಯೋಗಗಳಿಂದ ಭಕ್ತಿಯೋಗಕ್ಕೆ ಹೆಚ್ಚು ಪ್ರಾಶಸ್ತಿ ಇದೆ. ಏಕೆಂದರೆ ಕರ್ಮಯೋಗ

ಶ್ರೀ ಕಂದಾಡೈ ಕೇಶವನ್



ದಿಂದ ನಿರ್ಮಲ ಅಂತಃಕರಣನಾದವನು 'ಜ್ಞಾನ ಯೋಗೋಚಿತಸ್ವಾಂತೈಃ ಪರಿಶುದ್ಧಾತ್ಮನಿ ಸ್ಥಿತಿಃ' ಎಂಬಂತೆ ಪರಿಶುದ್ಧನಾಗಿ ಜಿತೇಂದ್ರಿಯನಾಗಿ ತನ್ನ ಆತ್ಮನು ಪ್ರಕೃತಿವಿಮುಕ್ತನು, ಈಶ್ವರನು ಶೇಷನು – ಎಂದು ಚಿಂತಿಸುವ ಜ್ಞಾನ ಯುಕ್ತ ಪ್ರವೃತ್ತಿಗೆ ಭಕ್ತಿಯೋಗವೆಂದು ಹೆಸರು. ನಿರಂತರವಾದ ಪ್ರೀತಿಯ ಅನುಭವವೇ ಭಕ್ತಿ. ನಾರದರ ದೃಷ್ಟಿಯಲ್ಲಿ ಪವಿತ್ರ ಪ್ರೇಮ ಅಮೃತ ಸ್ವರೂಪವಾದುದು. ಪತ್ನಿ ಪತಿಯನ್ನು ಅನನ್ಯ ಪ್ರೇಮದಿಂದ ಪ್ರೀತಿಸುವಂತೆ ಭಕ್ತ ದೇವರನ್ನು ಪ್ರೀತಿಸುವುದೇ ಭಕ್ತಿ. ಪರಾಶರರು ವ್ಯಾಸ ಮಹರ್ಷಿಗಳ ಪೂಜೆ ಧ್ಯಾನ ಭಜನೆಗಳ ಮಾರ್ಗ, ಗರ್ಗಾಚಾರ್ಯರ ಪರಮಾತ್ಮನ ಚರಿತ್ರೆಗಳನ್ನು ಕೇಳಿ ಆನಂದಪಡುವ ಮಾರ್ಗ, ನಾರದಸ್ತು ತದರ್ಪಿತಾ ಅಖಿಲಾಚರಿತಾ ತದ್ವಿಸ್ಮರಣೇ, ಪರಮ ವ್ಯಾಕುಲತೇತಿ – ಎಂಬ ಪರಮಭಕ್ತಿ ಸ್ವರೂಪ – ಇವೆಲ್ಲವನ್ನೂ ಪಾರ್ಥಸಾರಥಿಯು ಭಗವದ್ಗೀತೆಯಲ್ಲಿ ಭಕ್ತಿ ಯೋಗವನ್ನು ಎಲ್ಲಾ ಅಧ್ಯಾಯಗಳಲೂ ಉಪದೇಶ ಮಾಡಿದ್ದಾನೆ. 9 ನೇ ಅಧ್ಯಾಯದಲ್ಲಿ,

ಅನನ್ಯಾಶ್ಚಿಂತಯಂತೋ ಮಾಂ
ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ
ಯೋಗ ಕ್ಷೇಮಂ ವಹಾಮ್ಯಹಂ ॥

ಎಂಬುದಾಗಿ ಹೇಳುತ್ತಾ ಯಾರು ನಿಶ್ಚಿಂತೆಯಾಗಿ ಯಾವಾಗಲೂ ನನ್ನನ್ನೇ ಚಿಂತಿಸುತ್ತಾ ಉಪಾಸನೆ ಮಾಡುತ್ತಾರೋ ಅಂತಹವನ ಯೋಗಕ್ಷೇಮವನ್ನು ನಾನು ನೋಡಿಕೊಳ್ಳುತ್ತೇನೆ ಎಂಬುದಾಗಿ ಭರವಸೆ ಕೊಟ್ಟಿದ್ದಾನೆ. ಜಗದ ಒಡೆಯ ನಮ್ಮಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆಂಬ ವಾಗ್ದಾನ ಮಾಡಿದ ಮೇಲೂ ಜನರು ತತ್ತ್ವತಃ ನಿಶ್ಚಿಂತೆಯಾಗಿ ನಿರಂತರ ಅವನ ಚಿಂತನೆ ಮಾಡುತ್ತಿಲ್ಲ. ಭಕ್ತಿ ಯೋಗಕ್ಕೆ ವೇದನ, ಧ್ಯಾನ, ಉಪಾಸನೆ ಎಂಬ ಹೆಸರುಗಳೂ ಉಂಟು. ಈ ಭಕ್ತಿಯೋಗವು ತೈಲ ಧಾರೆಯಂತೆ. ನಿರಂತರ ಧ್ಯಾನ ಬಲದಿಂದ ದರ್ಶನ ದಿಂದ ಪರಭಕ್ತಿ ಪರಜ್ಞಾನ ಪರಮಭಕ್ತಿಯೆಂಬುವ ಅವಸ್ಥೆಗಳು ಕ್ರಮವಾಗಿ ಮಾನವನಿಗೆ ಬರುತ್ತವೆ.

ನಾರದರ ಮತದಲ್ಲಿ ತನ್ನ ಸಮಸ್ತ ಕರ್ಮಗಳನ್ನೂ ಪರಮಾತ್ಮನಿಗೆ ಅರ್ಪಿಸುವುದು. ಆತನನ್ನು ಅರೆಘಳಿಗೆ ಮರೆತರೂ ಅದಕ್ಕಾಗಿ ವ್ಯಾಕುಲಪಡುವುದು – ಭಕ್ತಿಯೆಂಬುದಾಗಿ ಹೇಳಿರುವಾಗ ಭಗವದ್ಗೀತೆಯಲ್ಲಿ ಸ್ವಾಮಿಯು ಅನೇಕ ಸಂದರ್ಭಗಳಲ್ಲಿ,

"ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮ ಚೇತಸಾ" – ಸಮಸ್ತ ಕರ್ಮಗಳನ್ನೂ ಪರಮಾತ್ಮನಲ್ಲಿ ಅರ್ಪಿಸುವುದು.

"ಮಚ್ಚಿತ್ತಾ ಮದ್ಗತ ಪ್ರಾಣಾಃ"

"ಮನ್ಮನಾಭವ ಮದ್ಭಕ್ತಃ, ಮದ್ಯಾಜೀ ಮಾಂ ನಮಸ್ಕುರು".

"ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯ ಯುಕ್ತಾ ಉಪಾಸತೇ"

"ಮಯ್ಯಾಸಕ್ತ ಮನಾಃ ಪಾರ್ಥ"

"ಮಯಿ ಚಾನನ್ಯ ಯೋಗೇನ"

"ಮಾಂ ಚಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ"
ಎಂಬುದಾಗಿ ಹೇಳಿದ್ದಾನೆ.

ಪರಮಾತ್ಮನು ತನ್ನ ಭಕ್ತನಿಗೆ ಎಂದಿಗೂ ಪರಾಭವವಿಲ್ಲ. "ನ ಮೇ ಭಕ್ತಃ ಪ್ರಣಶ್ಯತಿ" ಎಂಬುದಾಗಿ ಹೇಳುತ್ತಾನೆ. ಹರಿಯನ್ನು ನಂಬಿ ಕೆಟ್ಟವರಿಲ್ಲ – ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲಾ ಎಂಬ ಪುರಂದರದಾಸರ ಪದ ಇಲ್ಲಿ ಅನುಸಂಧಾನ. ಪರಮಾತ್ಮನು ತನ್ನನ್ನು ರಕ್ಷಿಸುತ್ತಾನೆ ಎಂಬುವ ವಿಶ್ವಾಸ ಬಹಳ ಮುಖ್ಯ. ಅವನಲ್ಲಿ ಶರಣಾಗತನಾಗುವುದೇ ಭಕ್ತರ ಲಕ್ಷಣ.

ಹಸಿವರಿತು ತಾಯ್ತನ್ನ ಶಿಶುವಿಗೆ
ಒಲಿದು ಮೊಲೆ ಕೊಡುವಂತೆ ನೀ ಪೋಷಿಸದೆ
ಬೇರಿನ್ನಾರು ಪೋಷಕರಾಗಿ ಸಲುಹುವರು
ಬಸಿರೊಳಗೆ ಬ್ರಹ್ಮಾಂಡ ಕೋಟಿಯ
ಪಸರಿಸಿದ ಪರಮಾತ್ಮ ನೀನೆಂದುಸುರುತಿವೆ
ವೇದಗಳು ರಕ್ಷಿಸು ನಮ್ಮನನವರತ

ಎಂಬುದಾಗಿ ಕನಕದಾಸರು ಹಾಡಿದ ಗೋಪ್ತೃತ್ವವರಣ ಶರಣಾಗತಿಯ ಲಕ್ಷಣಗಳು.

ಹಿಂದೆ ಹೇಳಿದ ಕರ್ಮಜ್ಞಾನ, ಭಕ್ತಿಯೋಗಗಳು ದುಷ್ಕರಗಳೆಂದೂ ಅತ್ಯಂತ ಪಾರತಂತ್ರ್ಯ ಭೂತನಾದ ಜೀವಾತ್ಮನಿಗೆ ಸ್ವರೂಪ ವಿರುದ್ಧಗಳೆಂದೂ ಬಗೆದು ಹುಟ್ಟುಸಾವುಗಳೆಂಬ ಭವ ಚಕ್ರಕ್ಕೆ ಸಿಲುಕಿ ನರಳುವ ಬದಲು ಸರ್ವರಕ್ಷಕನಾದ ಸರ್ವ ಶೇಷಿಯಾದ ಭಗವಂತನಲ್ಲಿ ಮರೆಹೋಗುವುದೇ ಶರಣಾಗತಿ ಅಥವಾ ಪ್ರಪತ್ತಿ ಎಂಬದಾಗಿ ಕರೆಯಲ್ಪಡುತ್ತದೆ. ಪರಮಾತ್ಮನ ಉಪದೇಶವನ್ನು ಕೇಳುತ್ತಾ ಕೇಳುತ್ತಾ ಅರ್ಜುನನು ಸ್ವಾಮಿಯ ವಿಶ್ವರೂಪ ದರ್ಶನವನ್ನು ಕಂಡ ಮೇಲೆ ಮಂತ್ರಮುಗ್ಧನಾಗಿ ಭಗವಂತನನ್ನು ಸುತ್ತಿಸುತ್ತಾ

ಪಿತಾಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್

ಸ್ವಾಮಿ; ಈ ಚರಾಚರ ಜಗತ್ತಿಗೆ ನೀನೇ ತಂದೆ. ನೀನೇ ಗುರು. ನೀನೆ ಅಪ್ರತಿಮನು. ನಮ್ಮಗಳ ಪೋಷಣ ಧಾರಣ, ರಕ್ಷಣಗಳಿಗೆ ಕರ್ತೃ ನೀನೆ. ನೀನು ಪ್ರಸನ್ನನಾಗು. ನಿನ್ನನ್ನು ಬಿಟ್ಟರೆ ಮತ್ತಾರು ನಮ್ಮನ್ನು ರಕ್ಷಿಸುವರಿಲ್ಲ. ನನ್ನ ಅಪರಾಧಗಳನ್ನೆಲ್ಲಾ ಕ್ಷಮಿಸು, ಕೃಪೆ ತೋರು, ಪ್ರಸೀದ ದೇವೇಶ ಜಗನ್ನಿವಾಸ – ಎಂಬುದಾಗಿ ಭಕ್ತಿ ಭಾವದಿಂದ ಶರಣು ಹೋಗುತ್ತಾನೆ ಪಾರ್ಥ. ವಿಶ್ವರೂಪವನ್ನು ಮರೆಮಾಡಿ ಶಾಂತತೆಯಿಂದ ಮಾನವರೂಪವನ್ನು ಹೊಂದುವಂತೆ ಪ್ರಾರ್ಥಿಸಿಕೊಂಡಾಗ ಪಾರ್ಥನ ಮಾತಿಗೆ ಓಗೊಟ್ಟು

ಭಕ್ತ್ಯಾ ತ್ವನನ್ಯಯಾ ಶಕ್ಯ
ಅಹಮೇವಂ ವಿಧೋಽರ್ಜುನ !
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ
ಪ್ರವೇಷ್ಟುಂ ಚ ಪರಂತಪ ॥

ಎಲೈ ಅರ್ಜುನನೇ ; ನನ್ನನ್ನು ಸಂಪೂರ್ಣವಾಗಿ ತಿಳಿಯುವುದಕ್ಕೂ ಯಥಾರ್ಥವಾಗಿ ನೋಡಿ ತತ್ತ್ವತ: ಸಾಕ್ಷಾತ್ಕಾರ ಮಾಡಿ ಕೊಳ್ಳುವುದಕ್ಕೂ ನನ್ನನ್ನೇ ಪಡೆಯುವುದಕ್ಕೂ ಅನನ್ಯ ಭಕ್ತಿಯಿಂದ ಮಾತ್ರ ಸಾಧ್ಯ ಎಂಬುದಾಗಿ ಶ್ರೀ ಕೃಷ್ಣನು ಹೇಳುತ್ತಾನೆ. ಇಲ್ಲಿ ಅನನ್ಯ ಭಕ್ತಿಯೆಂದರೆ ಬೇರೆಯವರ ಆಶ್ರಯವನ್ನೆಲ್ಲಾ ತೊರೆದು ಸ್ವಾಮಿಯೊಬ್ಬನನೇ ಆಶ್ರಯಿಸುವುದು. ಆಗ ಮಾತ್ರ ಪರಮಾತ್ಮನು ಭಕ್ತರ ಯೋಗಕ್ಷೇಮವನ್ನು ವಹಿಸುತ್ತಾನೆ. ಭಕ್ತರ ಸಂಕಟವನ್ನು ಹರಿಸುವ ವೆಂಕಟರಮಣನಾಗುತ್ತಾನೆ. ಅನನ್ಯವಾದ ಅಚಲವಾದ ಭಕ್ತಿಗೆ ಪರಮಾತ್ಮ ದಾಸನು. ಭಗವಂತನ ಪಾದಾರವಿಂದಗಳಲ್ಲಿ ಪ್ರೇಮದಿಂದ ಧ್ಯಾನಾಸಕ್ತನಾಗಿ ಮನಸ್ಸನ್ನು ಇಡುವುದೇ ಭಕ್ತಿ. ನಿರಂತರವೂ ಸ್ವಾಮಿಯನ್ನೇ ಶ್ರದ್ಧೆಯಿಂದ ನಿತ್ಯಯುಕ್ತನಾಗಿ ಉಪಾಸನೆ ಮಾಡುವುದೇ ಭಕ್ತಿ. ಭಗವದ್ಭಕ್ತಿ ಹುಟ್ಟ ಬೇಕಾದರೆ ಪ್ರಥಮತಃ ಭಗವಂತನ ಅನಂತ ಕಲ್ಯಾಣ ಗುಣಗಳನ್ನು ತಿಳಿಯುವುದು ಅವಶ್ಯಕ. ಅದಕ್ಕೋಸ್ಕರವೇ 12 ನೆಯ ಅಧ್ಯಾಯದಲ್ಲಿ ;

ಮಯ್ಯೇವ ಮನ ಆಧತ್ಸ್ವ ಮಯಿ
ಬುದ್ಧಿಂ ನಿವೇಶಯ

ಎಂಬುದಾಗಿ ಉಪದೇಶ ಮಾಡಿದ್ದಾನೆ. ನನ್ನಲ್ಲಿ ಮನಸ್ಸಿಡು ಎಂಬುದಾಗಿ ಸ್ವಾಮಿಯು ಹೇಳಿದ ಮರುಕ್ಷಣವೇ ಮಾನವರ ಮೇಲೆ ಮಮತೆಹೊಂದಿ "ಅಥ ಚಿತ್ತಂ ಸಮಾಧಾಮಂ ನ ಶಕ್ನೋಷಿ ಮಯಿ ಸ್ಥಿರಂ ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ" – ಅರ್ಜುನ; ಚಿತ್ತವನ್ನು

ನನ್ನಲ್ಲಿರಿಸಲು ಆಗದೆ ಹೋದರೆ ಪುನಃ ಅಭ್ಯಾಸ ಯೋಗದಿಂದ ನನ್ನನ್ನು ಹೊಂದಲು ಆಸೆಪಡು.

ಇದು ಪ್ರಯತ್ನ ದಿಂದ ಸಾಧ್ಯ. ಪರಮಾತ್ಮನನ್ನು ಪಡೆಯಬೇಕೆಂಬ ಪ್ರಯತ್ನ ಪೂರ್ವಕವಾದ ಇಚ್ಛೆಯೇ ಭಕ್ತಿಗೆ ಅಡಿಗಲ್ಲು, ಅಭ್ಯಾಸ ವೈರಾಗ್ಯ ಗಳಿಂದ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ.

ಅಭ್ಯಾಸೇಽಪ್ಯಸಮರ್ಥೋಽಸಿ
ಮತ್ಕರ್ಮ ಪರಮೋ ಭವ ।
ಮದರ್ಥಮಪಿ ಕರ್ಮಾಣಿ
ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ (12–19)

ಚಿತ್ತ ಸಮಾಧಾನದಿಂದ ಅಭ್ಯಾಸಯೋಗವನ್ನು ಮಾಡಲು ಅಸಮರ್ಥನಾದರೆ ನನ್ನನ್ನು ಕುರಿತು ಕರ್ಮ ಮಾಡು. ದೇವರ ಗುಡಿ ಮುಂತಾದುವುಗಳನ್ನು ಕಟ್ಟಿಸುವ ಕರ್ಮದಲ್ಲಿ ನಿರತನಾಗು. ಅಂದರೆ ಬುದ್ಧಿ ಬಲದಿಂದ ಜ್ಞಾನ ಮಾರ್ಗದಿಂದ, ಧ್ಯಾನ ಮಾರ್ಗದಿಂದ ಪರಮಾತ್ಮನನ್ನು ಚಿಂತಿಸಲು ಕಷ್ಟ ವಾದರೆ ದೇವರ ಕಾರ್ಯಗಳನ್ನು ಮಾಡುವುದರಲ್ಲಿ ಸಿದ್ಧಿ ಯನ್ನು ಹೊಂದು–ಎಂಬುದಾಗಿ ಪಾರ್ಥನಿಗೆ ಉಪದೇಶ ಮಾಡುತ್ತಾನೆ. ಕರ್ಮವನ್ನು ಮಾಡುತ್ತಾ ಸರ್ವಕರ್ಮ ಫಲತ್ಯಾಗವನ್ನು ಉಪ ದೇಶ ಮಾಡುತ್ತಾನೆ. ಯಾರು ತಾನು ಮಾಡುವ ಸರ್ವ ಕರ್ಮಗಳ ಫಲಾಪೇಕ್ಷೆ ಬಿಟ್ಟು, ನಿರ್ದ್ವಂದ ನಾಗುತ್ತಾನೋ, ಆದರಿಂದ ಶಾಂತಿ ಸುಖಗಳು ಉಂಟಾಗುತ್ತವೆ. ಇದು ಕಷ್ಟವಲ್ಲದ ಮಾರ್ಗ, ಅಂತಹ ಭಕ್ತನು ಸರ್ವಭೂತಗಳಲ್ಲಿ ದ್ವೇಷವಿಲ್ಲ ದವನು. ಸರ್ವಭೂತಹಿತರತನು. ಮಿತ್ರನು, ಕರುಣಾಳು, ಅಹಂಕಾರ ಮಮಕಾರ ರಹಿತನು, ಸಂತುಷ್ಟನು. ಸ್ಥಿತಪ್ರಜ್ಞನು ನನ್ನಲ್ಲೇ ಅರ್ಪಿಸಿದ ಮನಸ್ಸುಳ್ಳವನು. ಮತ್ತೆ ಮುಕುಂದನ ವಾಣಿ,

ಅನಪೇಕ್ಷಃ ಶುಚಿ ರ್ದಕ್ಷ
ಉದಾಸೀನೋ ಗತವ್ಯಥಃ ।
ಸರ್ವಾರಂಭ ಪರಿತ್ಯಾಗೀ
ಯೋ ಮದ್ಭಕ್ತಃ ಸ ಮೇ ಪ್ರಿಯಃ ॥

ಅನ ಪೇಕ್ಷನು ಶುಚಿ ಹಾಗೂ ದಕ್ಷತೆಯುಳ್ಳವನು ವಿಷಯಗಳಲ್ಲಿ ಅನಾಸಕ್ತನು. ವ್ಯಥೆಯಿಲ್ಲದವನು ಎಲ್ಲಾ ಆರಂಭವನ್ನೂ ಪರಿತ್ಯಾಗ ಮಾಡಿ ಫಲಾ ಪೇಕ್ಷೆಯಿಲ್ಲದ ನನ್ನ ಭಕ್ತನು ನನಗೆ ಅತ್ಯಂತ ಪ್ರಿಯನು. ಹಿಂದೆ ಹೇಳಿದ ಸರ್ವ ಕರ್ಮ ಫಲ ತ್ಯಾಗ ಮಾಡಿ ಈಶ್ವರನನ್ನು ಶರಣು ಹೊಂದುವ ಭಕ್ತ ಅತ್ಯಂತ ಪ್ರಿಯನು. ಈಶ್ವರನನ್ನೇ ಉಪಾ ಯವೆಂದು ಪ್ರಾರ್ಥಿಸುವುದೇ ಶರಣಾಗತಿ ಪ್ರಪತ್ತಿ. ವೇದಾಂತಗಳಲ್ಲಿ ಬ್ರಹ್ಮವಿದ್ಯೆಗಳಲ್ಲಿ ನ್ಯಾಸವಿದ್ಯೆ ಎಂಬುವುದೂ ಇದೆ.

ಅನುಕೂಲ್ಯಸ್ಯ ಸಂಕಲ್ಪಃ
ಪ್ರಾತಿಕೂಲಸ್ಯ ವರ್ಜನಂ ।
ರಕ್ಷಿಷ್ಯತೀತಿ ವಿಶ್ವಾಸೋ
ಗೋಪ್ತೃತ್ವ ವರಣಂ ತಥಾ ॥
ಆತ್ಮನಿಕ್ಷೇಪ ಕಾರ್ಪಣ್ಯೇ
ಷಡ್ವಿಧಾ ಶರಣಾಗತಿಃ ॥

ಜ್ಞಾನ ಯೋಗ ಕರ್ಮ ಯೋಗಗಳನ್ನು ಮಾಡಲು ಅಸಕ್ತರಾದವರು ಸರ್ವಕರ್ಮವನ್ನೂ ತ್ಯಾಗ ಮಾಡಿ ದೇವರನ್ನು ಶರಣು ಹೊಂದಿದರೆ ಮೋಕ್ಷ ಸಿದ್ಧ. ಅನುಕೂಲ್ಯಸ್ಯ ಸಂಕಲ್ಪಃ ಅಂದರೆ ಸರ್ವ ಪ್ರಾಣಿಗಳಲ್ಲೂ ಸ್ವಾಮಿಯು ಅಂತರ್ಯಾಮಿ ಯಾಗಿರುವುದರಿಂದ ಎಲ್ಲರಲ್ಲೂ ಪ್ರೀತಿಯಿಂದ ಇರುವುದೇ ಅನುಕೂಲ್ಯ ಸಂಕಲ್ಪ. ಎಲ್ಲವೂ ದೇವರ ಅಧೀನವೆಂದು ಸಹ್ಯಸ್ಯತಿ ಭಾವ. ಪ್ರಾತಿಕೂಲ ನಿವೃತ್ತಿಯೆಂದರೆ ಭಗವತ್ತ್ಯಾಗವತರ ವಿಷಯಗಳಲ್ಲಿ ಅಪಚಾರ ಮಾಡದ ಕಾರ್ಯಗಳು, ಅವರಲ್ಲಿ ವಿಧೇಯನಾಗಿರುವುದು. ಅಕೃತ್ಯಕರಣ. ಕೃತ್ಯಾಕರಣ ಭಗವದಪಚಾರ ಭಾಗವದಾಪಚಾರ ಮುಂತಾದ ನಾನಾವಿಧ ಅಪಚಾರಗಳಲ್ಲಿ ನಿವೃತ್ತಿ ಹೊಂದವುದು. ರಕ್ಷಿಷ್ಯತೀತಿ ವಿಶ್ವಾಸಃ– ಅಂದರೆ ಲಕ್ಷ್ಮೀಪತಿಯು ನಮ್ಮನ್ನು ರಕ್ಷಿಸುವನೆಂಬ ಅಚಲ ವಾದ ವಿಶ್ವಾಸ, ಗೋಪ್ತೃತ್ವವಂಣ – ನೀನೇ ಸ್ವಾಮಿ. ನಾನು ಸೇವಕ ನೀನೇ ರಕ್ಷಕ ಎಂಬುವ ಭಾವ. ಕಾರ್ಪಣ್ಯ ವೆಂದರೆ ದೈನ್ಯ, ಆತ್ಮ ನಿಕ್ಷೇಪ ಸಮರ್ಪಣಾಭಾವ – ಇವು ಶರಣಾಗತಿಯ ಲಕ್ಷಣ ಗಳು. ಇವನ್ನೇ ಶ್ರೀಕೃಷ್ಣ ಪರಮಾತ್ಮನು ಭಗ ವದ್ಗೀತೆಯ 18 ನೆಯ ಅಧ್ಯಾಯದಲ್ಲಿ ವಿವರ ವಾಗಿ ಪಾರ್ಥನಿಗೆ ಉಪದೇಶ ಮಾಡಿದ್ದಾನೆ. ವಿದ್ವಾಂಸರ ಮತದಲ್ಲಿ 18 ನೆಯ ಅಧ್ಯಾಯವು ಸಮಸ್ತ ಶಾಸ್ತ್ರಗಳ ಸಾರ, ಗೀತಾ ಶಾಸ್ತ್ರದ ತಿರುಳು. ವೇದ ಉಪನಿಷತ್ತುಗಳು ಇಲ್ಲಿ ಅವಿರ್ಭೂತವಾಗಿವೆ. ಗೀತಾ ಗಂಗೋದಕ ಸ್ನಾನ ಆಗುವುದು ಈ ಅಧ್ಯಾಯದಲ್ಲೇ ಎಂಬುದಾಗಿ ಪ್ರತಿಪಾದಿಸುತ್ತಾರೆ. ಕಾರಣ ಹಿಂದಿನ ಅಧ್ಯಾ ಯಗಳಲ್ಲಿ ಹೇಳಿದ ತ್ಯಾಗ, ಸನ್ಯಾಸ, ಸಾಂಖ್ಯ ಸಿದ್ಧಾಂತ, ಕರ್ಮ ಜ್ಞಾನಗಳ ಸಿದ್ಧಾಂತ. ಉಪಾಸನಾ ಸಹಿತವಾದ ನೈಷ್ಕರ್ಮ ಸಿದ್ಧಿ, ಭಕ್ತಿ ಸಹಿತವಾದ ಜ್ಞಾನ ಹಾಗೂ ಮೋಕ್ಷಪ್ರಾಪ್ತಿ ಈ ಅಧ್ಯಾಯದಲ್ಲಿ ಅಡಕವಾಗಿವೆ. ವಿವಾದಾಸ್ಪದಗಳಾದ ಕರ್ಮತ್ಯಾಗ ಮತ್ತು ಕರ್ಮ ಸನ್ಯಾಸ ತತ್ತ್ವಜ್ಞಾನ, ತರ್ಕನಿಷ್ಠೆ, ಯಜ್ಞದಾನ ತಪಸ್ಸು ಹಾಗೂ ನಿತ್ಯ ನೈಮಿತ್ತಿಕ ಕರ್ಮಗಳನ್ನು ಅವಶ್ಯಕವಾಗಿ ಜೀವನ ಪರ್ಯಂತ ಅನುಷ್ಠಿಸಬೇಕು. ಅವುಗಳನ್ನು ಬಿಡಲಾಗದು, ಏಕೆಂದರೆ ಭಕ್ತನಿಗೆ ಇವುಗಳು ಉಪಾಯಸಾಧನೆಗೆ ಬೇಕಾದ ಪ್ರತಿ ಬಂಧಕ ಪಾಪಗಳನ್ನು ನಿವಾರಿಸುತ್ತವೆ. ಇದಕ್ಕೆ ಸ್ವಾಮಿಯು;

ಯಜ್ಞ ದಾನ ತಪಃ ಕರ್ಮ
ನತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋದಾನಂ ತಪಶ್ಚೈವ
ಪಾವನಾನಿಮನೀಷಿಣಾಮ್ ॥

ಎಂಬುದಾಗಿ ತಿಳಿಸುತ್ತಾನೆ. ತ್ಯಾಗ ಹಾಗೂ ಸನ್ಯಾಸ ಇವರೆಡರ ನೈಜ ಸ್ವರೂಪದ ದರ್ಶನ ಸಿಗುತ್ತದೆ. ಮುಂದೆ ಯಜ್ಞಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ಬಿಟ್ಟು, ಜ್ಞಾನರೂಪ ಉಪಾಸನೆ ಯಿಂದ ಮೋಕ್ಷ ಸಾಧ್ಯ ಎಂಬ ರಾಜಸ ತ್ಯಾಗ ವನ್ನು ಹೇಳುತ್ತಾನೆ. ಮುಂದಿನ ಶ್ಲೋಕಗಳಲ್ಲಿ ಸಾತ್ತ್ವಿಕ ತ್ಯಾಗವ್ಯಾವುದು– ಅದು ಕರ್ಮಕ್ಕಾಗಿ ಕರ್ಮವನ್ನು ಆಚರಿಸುವ ಮಾರ್ಗ. ಸಂಗಂ ತ್ಯಕ್ತ್ವಾ ಎಂದರೆ ಕರ್ಮ ಮಾಡುತ್ತೇನೆ ಎಂಬುವ ಅಹಂಕಾರವನ್ನು ತೊರೆಯುವುದು.ಆದರ ಫಲತ್ಯಾಗವನ್ನೂ ಮಾಡುವುದು, ಅಂದರೆ ಪ್ರವೃತ್ತಿ ಧರ್ಮಗಳು ಬಂಧಕಗಳು. ನಿವೃತ್ತಿ ಧರ್ಮಗಳು ಮೋಕ್ಷಕ್ಕೆ ಸಾಧನಗಳು ಎಂಬುವುದಾಗಿ ಸ್ವಾಮಿ ವಿವರಿಸುತ್ತಾನೆ. ಕೆಲವು ಕರ್ಮಗಳು ಇಷ್ಟ ಅನಿಷ್ಟ, ಪ್ರಾಪ್ತಿ ಫಲಗಳನ್ನು ನೀಡುವುದರಿಂದ ಭಕ್ತನು ಸರ್ವ ಕರ್ಮಗಳಲ್ಲಿ ಕರ್ತೃತ್ವ ಫಲವನ್ನು ತ್ಯಾಗಮಾಡಬೇಕು. ಎಲ್ಲವನ್ನೂ ಭಗವತ್ಪ್ರೀತಿಗಾಗಿ ಮಾಡಲ್ಪಟ್ಟಿತೆಂಬ ಸಮರ್ಪಣಾ ಭಾವ ಬೆಳೆಸಿ ಕೊಳ್ಳಬೇಕು. ಮುಂದಿನ ಶ್ಲೋಕಗಳಲ್ಲಿ ಎಲ್ಲಾ ಕರ್ಮಗಳಲ್ಲಿ ಸಂಕಲ್ಪವು ಉಂಟಾಗುವ ಬಗೆ, ಅದನ್ನು ಮಾಡುವ ರೀತಿ, ಜಾನ್ನ, ಜ್ಞೇಯ ಪರಿಜ್ಞಾತಾ ಇವುಗಳ ವಿವರಣೆ, ಸಾತ್ತ್ವಿಕ ಜ್ಞಾನವೆಂದರೇನು, ರಾಜಸ ತಾಮಸ ಜ್ಞಾನಗಳು ಮೋಕ್ಷಪ್ರಾಪ್ತಿಗೆ ಹೇಗೆ ನಿಷಿದ್ಧವು – ಎಂಬುದನ್ನು ತಿಳಿಸುತ್ತಾನೆ. ಇವುಗಳು ಎಲ್ಲಾ ಕಷ್ಟಗಳಿಗೆ ಮೂಲ ಎಂಬುದನ್ನು ತಿಳಿಸುತ್ತಾನೆ. ಪ್ರತಿಯೊಂದು ಜೀವಿಯೂ ಹಾತೊರೆಯುವುದು ಸುಖಕ್ಕಾಗಿ, ಆನಂದಕ್ಕಾಗಿ. ಸುಖವು ಮೂರುವಿಧ-ಸಾತ್ತ್ವಿಕ ಸುಖವು ಪ್ರಾರಂಭದಲ್ಲಿ ದುಃಖಮಯವಾಗಿ ಕಂಡರೂ ಆತ್ಮ ಸ್ವರೂಪಾನುಸಂಧಾನವು ಕಾಣದಿದ್ದರೂ ಆತ್ಮಸುಖವು ಉಂಟಾಗಿ ಅಮೃತಸಮಾನವಾದ ಪ್ರಸನ್ನತೆ ಉಂಟಾಗುತ್ತದೆ. ಪ್ರಾರಂಭದಲ್ಲಿ ವಿಷಯಸುಖ ಸುಖಕರವಾಗಿದ್ದರೂ ಪರಿಣಾಮದಲ್ಲಿ ಸುಖಾನುಭವ ತೀರಿದ ಮೇಲೆ ಅದರ ಸಂಗದಿಂದ ಆಗುವ ಸುಖ ರಾಜಸವೆನಿಸುತ್ತದೆ. ಆದಿ ಮಧ್ಯ ಅಂತ್ಯಗಳಲ್ಲಿ ನಿದ್ರಾ, ಆಲಸ್ಯ ಹಾಗೂ ಪ್ರಮಾದಗಳಿಂದ ಉಂಟಾಗುವ ಸುಖವು ತಾಮಸ ಸುಖವೆನಿಸುತ್ತದೆ. ಅವರವರ ವರ್ಣಗಳಿಗೆ ತಕ್ಕಂತೆ ಸ್ವಭಾವ, ಅವಕ್ಕೆ ತಕ್ಕಂತೆ ಗುಣ ಕರ್ಮವಿಭಾಗಿ

ಸಲ್ಪಟ್ಟಿವೆ. ನಾಲ್ಕು ವರ್ಣದವರೂ ಮೋಕ್ಷವನ್ನು ಹೊಂದಬಹುದು.

ಸ್ವೇ ಸ್ವೇ ಕರ್ಮಣ್ಯಭಿರತಃ
ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ
ಯಥಾ ವಿಂದತಿ ತಚ್ಛೃಣು ॥

ಮೋಕ್ಷವನ್ನು ಅಪೇಕ್ಷಿಸುವ ಮನುಷ್ಯನು ತನಗೆ ವಿಹಿತವಾದ ಕರ್ಮದಲ್ಲಿ ಆಸಕ್ತಿಯುಳ್ಳವನಾದರೆ ಕ್ರಮೇಣ ಸಿದ್ಧಿಯನ್ನು ಹೊಂದುತ್ತಾನೆ. ಎಷ್ಟೋ ಶ್ರೇಷ್ಠವಾದ ಪರಧರ್ಮಕ್ಕಿಂತ ತಾನು ಆಚರಿಸುವ ಸ್ವಧರ್ಮವೇ ಒಳ್ಳೆಯದು.

ಅಸಕ್ತಬುದ್ಧಿಃ ಸರ್ವತ್ರ
ಜಿತಾತ್ಮಾ ವಿಗತ ಸ್ಪೃಹಃ ।
ನೈಷ್ಕರ್ಮ್ಯ ಸಿದ್ಧಿಂ
ಪರಮಾಂ ಸಂನ್ಯಾಸೇನಾಧಿಗಚ್ಛತಿ ॥

ವಿಷಯಗಳಲ್ಲಿ ಆಸಕ್ತಿಯಿಲ್ಲದವನಾಗಿ ಜಿತಾತ್ಮನಾಗಿ ಆಶಾರಹಿತನಾಗಿ ಕರ್ಮ ಸಂನ್ಯಾಸದಿಂದ ಕೂಡಿ ಕರ್ಮಯೋಗವನ್ನು ಆಚರಿಸುವವನು ನೈಷ್ಕರ್ಮ ಸಿದ್ಧಿಯನ್ನು ಹೊಂದುತ್ತಾನೆ. ಶಬ್ದಾದಿ ವಿಷಯೋಪಭೋಗಗಳನ್ನು ತ್ಯಾಗಮಾಡಿ ರಾಗ ದ್ವೇಷಗಳನ್ನು ತ್ಯಜಿಸಿ ಮನಸ್ಸಿನ ಏಕಾಗ್ರತೆಯಿಂದ ಧ್ಯಾನಾಸಕ್ತನಾಗಿ ಮಿತಾಹಾರನಾಗಿ, ಆತ್ಮಾವಲೋಕನವನ್ನು ಮಾಡುವವನು ಕರ್ಮಯೋಗದ ತುದಿಮೆಟ್ಟಿಲನ್ನು ಹತ್ತಿರುತ್ತಾನೆ. ಕರ್ಮಯೋಗದ ಫಲವಾಗಿ ಉಂಟಾಗುವ ಆತ್ಮಾವಲೋಕನವು, ಭಕ್ತಿಯೋಗಕ್ಕೆ ಪೂರಕವಾಗುತ್ತದೆ. ಮದ್ಭಕ್ತಿಂ ಲಭತಾಂ ಪರಾಂ–ಎಂದರೆ ಶ್ರೇಷ್ಠವಾದ ನನ್ನ ಭಕ್ತನಾಗುತ್ತಾನೆ. ಅಂತಹ ಭಕ್ತನು – ನ ಶೋಚತಿ, ನ ಕಾಂಕ್ಷತಿ, ಸಮಃ ಸರ್ವೇಷು ಭೂತೇಷು–ನಾನಲ್ಲದೆ ಇನ್ನು ಯಾವುದಕ್ಕೂ ಶೋಕಿಸನು. ಅಪೇಕ್ಷಿಸನು. ಸರ್ವಭೂತಗಳಲ್ಲಿ ಸಮತ್ವವನ್ನು ಕಾಣುತ್ತಾನೆ, ಎಲ್ಲಾ ಕರ್ಮಗಳನ್ನು ಆಚರಿಸುವಾಗ ನನ್ನನ್ನೇ ಭಾವಿಸಿ ನನ್ನ ಅನುಗ್ರಹಕ್ಕಾಗಿ ಹಾತೊರೆಯುತ್ತಾನೆ. ಮದ್ವ್ಯಪಾಶ್ರಯಃ–ನಾನೇ ಶರಣ್ಯನೆಂದು ನಂಬುತ್ತಾನೆ. ಮಚ್ಚಿತ್ತಃ ಸತತಂ ಭವ. – ಯಾವಾಗಲೂ ತನ್ನ ಚಿತ್ತವನ್ನು ನನ್ನಲ್ಲಿಯೇ ಇಟ್ಟಿರುತ್ತಾನೆ ಎಂಬುದಾಗಿ ಶ್ರೀಕೃಷ್ಣನು ಹೇಳುತ್ತಾನೆ. ಅಹಂಕಾರ ನಿಷಿದ್ಧ. ಅರ್ಜುನ; ಈಶ್ವರನು ಎಲ್ಲಾಜೀವಿಗಳ ಹೃದಯದಲ್ಲಿ ನೆಲೆಸಿದ್ದಾನೆ. ಆದ್ದರಿಂದ;

ತಮೇವ ಶರಣಂ ಗಚ್ಛ
ಸರ್ವಭಾವೇನ ಭಾರತ ।
ತತ್ಪ್ರಸಾದಾತ್ಪರಾಂ ಶಾಂತಿಂ
ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥

ಎಲೈ ಅರ್ಜುನ, ಸರ್ವಭಾವದಿಂದ ನನ್ನನ್ನೇ ಶರಣು ಹೊಂದು. ನನ್ನ ಪ್ರಸಾದದಿಂದ ಶಾಶ್ವತವಾದ ಸುಖಶಾಂತಿ ದೊರಕುತ್ತದೆ, ಇದು ಗೋಪ್ಯಕ್ಕಿಂತ ಗೋಪ್ಯವಾಗಿರುವ ಜ್ಞಾನವು. 'ಸರ್ವಗುಹ್ಯ ತಮಂ ಭೂಯಃ ಶೃಣು ಮೇ ಪರಮಂ ವಚಃ' – ಎಂಬುದಾಗಿ ಅರ್ಜುನನಿಗೆ ಉಪದೇಶ ಮಾಡುತ್ತಾನೆ. ಹಿಂದೆ 9ನೆಯ ಅಧ್ಯಾಯದಲ್ಲಿ ಹೇಳಿದ ಉಪದೇಶವನ್ನೇ ಪುನಃ ಒತ್ತಿ ಹೇಳುತ್ತಾನೆ

ಮನ್ಮನಾಭವ ಮದ್ಭಕ್ತೋ
ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಸತ್ಯಂ ತೇ
ಪ್ರತಿಜಾನೇ ಪ್ರಿಯೋಽಸಿ ಮೇ ॥

ನೀನು ನನ್ನನ್ನು ಏಕಮನಸ್ಸಿನಿಂದ ಉಪಾಸಿಸು. ನನ್ನ ಭಕ್ತನಾಗು. ನನ್ನನ್ನೇ ನಿರಂತರವೂ ಸ್ಮರಿಸುವವನಾಗು. ಎಲ್ಲವನ್ನೂ ನನಗೆ ಸಮರ್ಪಿಸು. ನಿನ್ನ ಎಲ್ಲಾ ಪ್ರವೃತ್ತಿಗಳಲ್ಲಿ ಅಂತರಂಗ ಬಹಿರಂಗ ಪೂರ್ವಕ ನನ್ನನ್ನು ಹೊಂದಲು ಅಪೇಕ್ಷಿಸು. ನೀನು ನನ್ನನ್ನು ಸೇರುವೆ. ಇದು ಸತ್ಯವಾದ ಮಾತು ಪರಮಾತ್ಮನ ಉಪದೇಶದಲ್ಲಿ ಚರಮಶ್ಲೋಕ ಬಹು ಗುಹ್ಯ ಮಂತ್ರ. ಚರಮ ಶ್ಲೋಕವಾದ

ಸರ್ವಧರ್ಮಾನ್ ಪರಿತ್ಯಜ್ಯ
ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ
ಮೋಕ್ಷಯಿಷ್ಯಾಮಿ ಮಾ ಶುಚಃ ॥

ಎಂಬುದರ ಮೇಲೆ ಪೂರ್ವಾಚಾರ್ಯರು ಎಲ್ಲಾ ಸಂತರು, ಜ್ಞಾನಿಗಳು, ತತ್ತ್ವನಿಷ್ಠರು ಪುಟಗಟ್ಟಲೆ ವ್ಯಾಖ್ಯಾನ ಮಾಡಿದ್ದಾರೆ. ಕಾರಣ ಈ ಶ್ಲೋಕ ಅಭಯ ಪ್ರಧಾನವಾದ ಶ್ಲೋಕ. ಭಕ್ತಿಗೆ, ಶರಣಾಗತಿಗೆ, ಪ್ರಪತ್ತಿಗೆ–ಈ ಶ್ಲೋಕ ಶಿಖರಪ್ರಾಯವಾದುದು. ಸರ್ವಧರ್ಮಗಳನ್ನೂ ತ್ಯಾಗ ಮಾಡಿ ನನ್ನೊಬ್ಬನನ್ನೇ ಅನನ್ಯ ಭಾವದಿಂದ ನಿರ್ಹೇತುಕ ಪ್ರೇಮದಿಂದ ಭಜಿಸು. ನಾನು ನಿನ್ನನ್ನು ಉದ್ಧಾರಮಾಡುತ್ತೇನೆ, ನೀನು ಚಿಂತಿಸಬೇಡ ಎಂಬ ಪಾರ್ಥಸಾರಥಿಯು ಸರ್ವಜನ ಹಿತಕ್ಕಾಗಿ ನೀಡಿರುವ ಆಶ್ವಾಸನೆ. ಇದೇ ಗೀತೆಯ ಸಾರ. 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ', ಎಂಬ ಭಕ್ತಿ ಭಾವ ಭಕ್ತನಲ್ಲಿ ಉಂಟಾಗುವುದು ಈ ಚರಮ ಶ್ಲೋಕದ ಅನುಸಂಧಾನದಿಂದ, ದೃಢವಿಶ್ವಾಸದಿಂದ. ಇಲ್ಲಿ ಪ್ರವೃತ್ತಿ ಮಾರ್ಗಕ್ಕಿಂತ ನಿವೃತ್ತಿಮಾರ್ಗ ಸುಲಭ ಎಂಬುವುದನ್ನು ಸ್ವಾಮಿ ಉಪದೇಶಮಾಡಿದ್ದಾನೆ. ಈ ಪರಮ ರಹಸ್ಯವಾದ ಉಪದೇಶವನ್ನು ಯಾರು ಆಚರಿಸುತ್ತಾರೋ ಅವರು ನಿಸ್ಸಂಶಯವಾಗಿ ಪರಮಾತ್ಮನನ್ನು ಸೇರುತ್ತಾನೆ. ಗೀತೆಯ ಸಮಾಪ್ತಿ ಶ್ಲೋಕ

ಯತ್ರ ಯೋಗೀಶ್ವರಃ ಕೃಷ್ಣೋ
ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿ
ರ್ಧ್ರುವಾ ನೀತಿರ್ಮತಿರ್ಮಮ ॥

ಸಂವಾದದ ರೂಪದಲ್ಲಿರುವ ಈ ಭಗವದ್ಗೀತೆಯನ್ನು ಆ ಅರ್ಜುನ ಕೃಷ್ಣರ ದಿವ್ಯ ನಾಮಸ್ಮರಣೆಯನ್ನು ಎಲ್ಲಿ ಬಿಡದೆ ಮಾಡುತ್ತಾರೋ ಅಲ್ಲಿ ಸಂಪತ್ತು ವಿಜಯ ಹಾಗೂ ಶಾಶ್ವತವಾದ ಅಮರವಾದ ಧರ್ಮಗಳಿರುತ್ತವೆ. ಅಲ್ಲಿ ಸುಖವೂ ಇರುತ್ತದೆ. 'ಪೀತ್ವಾ ಗೀತಾಮೃತಂ ಲೋಕೇ ಲಬ್ಧ್ವಾ ಭಕ್ತಿಂ ಸುಖೀ ಭವೇತ್' ಹಾಗೂ ಸ್ವಾಮಿಯ-ವಾಣಿಯೂ ಕೂಡ ಪೂರಕವಾದುದು

ಯತ್ರ ಗೀತಾ ವಿಚಾರಸ್ಯ
ಪಠನಂ ಪಾಠನಂ ಶ್ರುತಂ ।
ತತ್ರಾಹಂ ನಿಶ್ಚಿತಂ ಪೃಥ್ವಿ
ನಿವಸಾಮಿ ಸದೈವ ಹಿ ॥

ಸ್ವಾಮಿಯ ಗೀತಾ ತತ್ತ್ವೋಪದೇಶ ಸರ್ವತೋಮುಖಸುಂದರ. ಶ್ರೋತೃವು ಇದರ ಸವಿಯಿಂದ ಮೋಕ್ಷಪ್ರಾಪ್ತಿಯನ್ನು ಹೊಂದುತ್ತಾನೆ. ★

## ಪ್ರಕಟನೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು. ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಟು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು. –ತಿ. ತಿ. ದೇ.

ಹರಿದಾಸವಾಣಿ

# ಪುರಂದರದಾಸರ ಪದಗಳಲ್ಲಿ ಆಂಧ್ರದೇಶದ ಪುಣ್ಯಕ್ಷೇತ್ರಗಳು



ಗ್ರಾಮಾಧೀಶನು ಗ್ರಾಮದಲ್ಲಿ ಬಾಳುತ್ತಾನೆ, ಅರಸನು ಅವನ ರಾಜ್ಯದಲ್ಲಿ ಸತ್ಕಾರಗಳನ್ನು ವೈಭವದಿಂದ ಹೊಂದುತ್ತಾನೆ. ಆದರೆ ಪಂಡಿತರು, ಕವೀಂದ್ರರು, ಕಲಾಕೋವಿದರು ಎಲ್ಲಿ ಹೋದರೂ ಮಾನ್ಯರಾಗುತ್ತಾರೆ. ವಿಶೇಷತಃ ಗಾಯಕರು ಪಂಡಿತ ಪಾಮರ ಭೇದಗಳಿಲ್ಲದೆ ಸನ್ಮಾನಿತರಾಗುತ್ತಾರೆ. ಈ ನಿಯಮಕ್ಕೆ ಮತ ಭೇದವಿಲ್ಲ, ಜಾತಿ ವಿಭೇದಗಳೂ ಇಲ್ಲ. ಆದ್ದರಿಂದ ಶಿವ ಶರಣರೂ ಮತ್ತು ಹರಿದಾಸರೂ ಕನ್ನಡನಾಡಿನಲ್ಲಿ ಮಾನ್ಯರಾದರು.

ಹರಿದಾಸರ ಸಮೂಹದಲ್ಲಿ ಪುರಂದರ ದಾಸರಿಗೆ ಪ್ರಮುಖಸ್ಥಾನವಿದೆ. 'ದಾಸರೆಂದರೆ ಪುರಂದರದಾಸರಯ್ಯ' ಎಂದು ವ್ಯಾಸರಾಯರು ಮೆಚ್ಚಿ ಹೊಗಳಿದ್ದಾರೆ. ದಾಸರು ಆಂಧ್ರ, ಕರ್ನಾಟಕ ಮತ್ತು ತಮಿಳುನಾಡಿನ ಪುಣ್ಯಕ್ಷೇತ್ರಗಳನ್ನು ಸೇವಿಸಿ, ಅಲ್ಲಿದ್ದ ದೇವತಾಮೂರ್ತಿಗಳ ಬಗ್ಗೆ ಮನದುಂಬಿ ಹಾಡಿದ್ದಾರೆ. ಆಂಧ್ರ ದೇಶದ ಪುಣ್ಯಕ್ಷೇತ್ರಗಳಲ್ಲಿ ತಿರುಪತಿ, ಅಹೋಬಿಲ, ಸಿಂಹಾದ್ರಿ, ಭದ್ರಾಚಲಗಳು ಪ್ರಸಿದ್ಧವಾದವು.

ದಾಸರು ತಿಮ್ಮಪ್ಪನ ಕುರಿತು ಹಾಡಿದ ಪದಗಳಲ್ಲಿ ದೊರಕಿರುವವು 61. ಇವುಗಳನ್ನು ತಿರುಮಲೆ – ತಿರುಪತಿ ದೇವಸ್ಥಾನದವರು ಪ್ರಕಟಿಸಿದ್ದಾರೆ. ಆ ಪದಗಳಲ್ಲಿ ಕ್ಷೇತ್ರ ನಾಮವು ಕಾಣುತ್ತದೆ.

ತಳುವ ಮಾಡದಿರಯ್ಯ ಸ್ವಾಮಿ
ತಿರುಮಲೆ ರಾಯ
* * * *
ಶೇಷಗಿರಿಯಲಿ ವಾಸ ಶ್ರೀ ವೆಂಕಟಗಿರಿ
ತಿರುಮಲೇಶ
* * * *
ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ
ಕಂಡೆ ತಿರುಪತಿ ವೆಂಕಟೇಶನ
* * * *

ವೆಂಕಟರಮಣನ ಕುರಿತು ಹಾಡಿದ ಪದಗಳು ಮೂರು ಬಗೆಯಾಗಿ ಕಾಣುತ್ತವೆ. ವೈಯಕ್ತಿಕ ವೃತ್ತಾಂತಪದಗಳು, ಸ್ವಾಮಿಯ ವೈಭವ ಪದಗಳು ಮತ್ತು ನೀತಿ ವೈರಾಗ್ಯ ಪ್ರಬೋಧಕ ಪದಗಳು. ವೈಯಕ್ತಿಕ ಪದಗಳಲ್ಲಿ ದಾಸರು ತಮ್ಮ ಉದ್ವೇಗ, ಚಿಂತೆಗಳನ್ನು ಅಭಿವ್ಯಕ್ತಿಸುತ್ತಾರೆ. ಬಾಲ್ಯ ಯೌವನದೆಶೆಗಳಲ್ಲಿ ನಡೆದ ಸಂಘಟನೆಗಳನ್ನು ಉದಾಹರಿಸುತ್ತಾರೆ. ಉದಾಹರಣೆಗೆ–

ಅತಿಥಿಗಳು ಬಂದರೆ ಮನೆಗೆ–ಅಂದೆ
ಗತಿ ಇಲ್ಲವಯ್ಯ ಕೊಡುವುದಕೆ
ಯತಿಯ ಕಂಡರೆ ನಿಂದಿಸಿದೆ–
* * * *
ಪರರ ಬೇಡಿಪ್ಪಂತೆ ಗತಿಯಾಯಿತಲ್ಲ
ನರರ ತುತಿಸಿ ನಾಲಿಗೆ ಬರಡಾಯಿತಲ್ಲ
ಪರವಿಲ್ಲ ಇಹವಿಲ್ಲ ನರಜನ್ಮ ಸ್ಥಿರವಲ್ಲ
* * * *

ಸ್ವಾಮಿಯ ವೈಭವ ವರ್ಣನೆ ಪದಗಳಲ್ಲಿ ಆಕಾರವರ್ಣನೆ, ಅವತಾರ ವರ್ಣನೆ, ಕ್ಷೇತ್ರ ಪ್ರಶಸ್ತಿ ಕಥನವು ಕಾಣುತ್ತವೆ. ಆಕಾರ ವರ್ಣನೆಯು ಎರಡು ಬಗೆಯಾಗಿ ಇದೆ. ಒಂದು– ವಿಗ್ರಹವರ್ಣನೆ, ಎರಡು— ದಾಸರ ಮನೆಗೆ ಬಂದ ಶ್ರೀನಿವಾಸನ ವರ್ಣನೆ.

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ
ಕೋಟಿ ಸೂರ್ಯ ಪ್ರಕಾಶವೆನಿಪ–ಕಿ
ರೀಟವನು ಮಸ್ತಕದಿ ಕಂಡೆನು
ನೋಟಕಜ್ಜರಿಯೆನಿಪ ನಗೆ ಮುಖ
ನೊಸಲೊಳಗೆ ತಿರುಮಣಿಯ ಕಂಡೆನು

ಇಲ್ಲಿ ವೆಂಕಟರಮಣನ ರೂಪಶ್ರೀಯನ್ನು ವರ್ಣಿಸಲಾಗಿದೆ.

ಇಂದು ನಾನೇನು ಸುಕೃತವ
ಮಾಡಿದೆನೊ
ಇಂದಿರೆಯರಸ ವೆಂಕಟ ಬಂದ ಮನೆಗೆ

– ಪದದಲ್ಲಿ ಕಸ್ತೂರಿ ಬೊಟ್ಟು, ಕಂಗಳ ಥಾಳ, ಕುಸುಮದ ಸೊಬಗು, ಹಾರ ಕೇಯೂರ ಹೊನ್ನುಂಗುರದ ಬೆರಳು, ಹಾರದ ನಡುವೆ ಪದಕ ಮುತ್ತಿನ ಕಂಠ ಮಾಲೆ, ನೀಲ ಮುತ್ತಿನ ಕಂಠಾಭರಣ, ಝಗಿಪ ಪೀತಾಂಬರವು, ಕಠಾರಿ, ಬಾಲ ಚಂದ್ರನ ಹೋಲುವ ಕಪೋಲಕುಂಡಲ, ಕಾಲ ಪೆಂಡೆ, ರತ್ನದ ಪಾದುಕೆ, ಕರಯುಗದಲ್ಲಿ ಶಂಖ ಚಕ್ರಗಳು ಕಾಣುತ್ತವೆ.

ಅವತಾರವರ್ಣನೆಗಳನ್ನು ಎರಡು ಬಗೆಯಾಗಿ ದಾಸರು ಹಾಡಿದ್ದಾರೆ. ದಶಾವತಾರಗಳನ್ನು ಹೊಗಳುವುದು ಒಂದು. ವೆಂಕಟರಮಣನ ಆವಿರ್ಭಾವಕ್ಕೆ ಕಾರಣವಾದ ಕಥೆ ಹೇಳುವುದು ಮತ್ತೊಂದು.

ಸಕಲ ದುರಿತಗಳ ಪರಿಹಾರ ಮಾಡಿದ್ಯೋ
ವೆಂಕಟೇಶ

ಡಾ॥ ಕೆ. ಸರ್ವೋತ್ತಮನ್

ಭಕುತಿ ಗೊಲಿದು ಬಂದು ಭಕ್ತರ
ಕಾಯ್ದ್ಯೋ ವೆಂಕಟೇಶ

ಕೀರ್ತನೆಯಲ್ಲಿ ಅವತಾರ ಕಥೆಗಳನ್ನು ಹಾಡಿನ ದಾಸರು,

"ಹರಿದಾಸರ ಮೇಲೆ ಒಲಿದು ಬೇಗದಿ ಬಂದ್ಯೋ ವೆಂಕಟೇಶ" ಎಂದು ಮುಗಿಸುವುದರಲ್ಲಿ ಚಮತ್ಕಾರ ಕಾಣುತ್ತದೆ.

'ದಾಸ ಶೇಷಾದ್ರಿವಾಸ' ಪದದಲ್ಲಿ ಶೇಷಾಚಲ ಪರ್ವತದ ಏಳು ಹೆಸರುಗಳನ್ನು ಸೂಚಿಸುತ್ತಾ ಆ ಹೆಸರಿನಿಂದೊಪ್ಪುವ ಪರ್ವತದಲ್ಲಿರುವ ಶ್ರೀನಿವಾಸನನ್ನು ಹೊಗಳಿದ್ದಾರೆ. ನೀತಿ ವೈರಾಗ್ಯ ಬೋಧಕ ಪದಗಳಲ್ಲಿ ವೆಂಕಟರಮಣನ ಪ್ರಶಂಸೆ ನಾಮಮಾತ್ರವೇ. ಜನರು ನೀತಿವಂತರಾಗಿ ಭಕ್ತರಾಗಿ ಜೀವಿಸ ಬೇಕೆಂದು ಅವರ ಅಭಿಪ್ರಾಯ. ಉದಾಹರಣೆಗೆ–

ಹಿಂದಿಲ್ಲಾ ಸ್ವಾಮಿ ಮುಂದಿಲ್ಲಾ-ಗೋ
ದಿಂದ ನೀನಲ್ಲದೆ ಇಹ ಪರವಿಲ್ಲ
ತನುವು ತನ್ನದಲ್ಲ ತನ್ನವರು ತನಗಿಲ್ಲ
ಅನುಕೂಲವಿರುವಾಗ ಸತಿಸುತರೆಲ್ಲ
ಅನುವು ತಪ್ಪಿ ಮನ ತಲ್ಲಣಿಸುವಾಗ
ವನಜನಾಭ ನೀನಲ್ಲದೆ ಯಾರಿಲ್ಲ

*　*　*　*

ದಾಸರಿಗೆ ಇಷ್ಟವಾದ ಉತ್ಸವ ಪಲ್ಲಕ್ಕಿ ಉತ್ಸವ, ಅವರು ಕನಸಿನಲ್ಲಿ ಕಂಡಂತೆ ನುಡಿಯುತ್ತಾರೆ.

ಧ್ವಜದ ತಿಮ್ಮಪ್ಪ ಪಲ್ಲಕಿಯೇರಿ ತನ್ನಯ
ನಿಜಗಿರಿ ಯಾತ್ರೈಗೈದಿದ ಹುಸುಹುನ ಕೇಳಿ

–ಕೀರ್ತನೆಯಲ್ಲಿ ಅವರ ಮನೋನೇತ್ರದಲ್ಲಿ ಪಲ್ಲಕಿ ಉತ್ಸವ ಗೋಚರವಾಗುತ್ತದೆ.

ಬಲದಲಬುಜಭವ ಭವಾದಿಗಳೆಡದಲಿ
ಉಲಿವ ವೇದ ಉಪನಿಷದುಗಳು
ಸಲುಗೆಯಲಿ ಸನಕಾದಿಗಳು ಸೇವಿಸಿ
ಮುನ್ನ
ಹಲವು ಋಷಿ ಮುನಿನಿಕರ ಹಿಂದೆ
ಬರುತಿರಲು
ಛತ್ರವ ಶಚಿ ಚಾಮರವ ಧಾಳಿಸಿ ಇಂದ್ರ
ಚಿತ್ತ ಜಾತನು ವ್ಯಜನವ ಬೀಸಲು
ಹೊತ್ತು ಮಾರುತಿ ಹಡಪ ಹೋಳಿಸೆಲೆಗಳ
ಕೊಡಲು
ಹಸ್ತದ ಕಾಳಂಜಿ ಹರಿಣಾಂಕನು ಬರೆ
ಮಂದರ ಮಧ್ಯನು ತಾರಕ ಮೋಹನ
ದಿಂದ ಗಂಧರ್ವರು ಗಾನ ಮಾಡೆ
ತೋಂ ಧಿಮಿ ಧಿಮಿಕೆಂದು ತಾಳಮೇಳದಿ
ನಾ
ರಂದ ನಾಡಲು ಆಡುತಾಡುತ ಬರುತಿರೆ.

*　*　*　*

ದಾಸರು ಹಾಡಿದ ಮತ್ತೊಂದು ಕ್ಷೇತ್ರ ಅಹೋಬಿಲ. ಆಂಧ್ರಪ್ರದೇಶ್ ಕರ್ನೂಲ್ ಜಿಲ್ಲೆಯ ಆಳ್ಳಗಡ್ಡ ತಾಲ್ಲೂಕಿನಲ್ಲಿರುವ ಪ್ರಸಿದ್ಧ ವೈಷ್ಣವ ಕ್ಷೇತ್ರ ಅಹೋಬಿಲ. ಈ ಕ್ಷೇತ್ರ ಪ್ರಸಿದ್ಧಿಗೆ ಎರಡು ಕಾರಣ; ಒಂದು ಅದು ನರಸಿಂಹ ಕ್ಷೇತ್ರ. ಎರಡನೆಯದು ಅದು ರಾಮಾನುಜರ ಸ್ಥಾಪಿಸಿದ ವೈಷ್ಣವ ಮತ ಕೇಂದ್ರ. ಇದು ದ್ವೈತ ವಿಶಿಷ್ಟಾದ್ವೈತ ಪಂಥದವರಿಗೆ ಮುಖ್ಯ. ತಮಿಳಿನಲ್ಲಿರುವ ನಾಲಾಯಿರ ದಿವ್ಯಪ್ರಬಂಧದಲ್ಲಿ ಅಹೋಬಿಲವನ್ನು ಕುರಿತು 10 ಪಾಶುರಗಳು ಕಾಣುತ್ತವೆ. ತೆಲುಗಿನಲ್ಲಿ ಅನ್ನಮಾಚಾರ್ಯರು ಅವರ ಸಮಕಾಲೀನರಾದ ಪುರಂದರದಾಸರು ಅಹೋಬಿಲ ನಾರಸಿಂಹನನ್ನು ಸ್ತುತಿಸಿದ್ದಾರೆ.

ಮಹದಾದಿ ದೇವ ನಮೋ
ಮಹದಾದಿ ದೇವ ನಮೋ
ಮಹಾಮಹಿಮನೆ ನಮೋ
ಪ್ರಹ್ಲಾದವರದ
ಅಹೋಬಿಲ ನಾರಸಿಂಹ

–ಪದದಲ್ಲಿ ಸ್ವಾಮಿ ಪ್ರಾದುರ್ಭಾವವನ್ನು ಹಾಡಿದ್ದಾರೆ. ದಾಸರಿಗೆ ನರಸಿಂಹನೆಂದರೆ ಭಕ್ತಿ ಹೆಚ್ಚು. 'ನರಸಿಂಹ ಮಂತ್ರ ಒಂದಿರಲು ಸಾಕು' ಇದೇ ಅವರ ನಿರ್ಣಯ. ಆದ್ದರಿಂದ ಅವರು ನರಸಿಂಹ ಕ್ಷೇತ್ರವನ್ನು ಸೇವಿಸುವುದರಲ್ಲಿ ಆಶ್ಚರ್ಯವಿಲ್ಲ.

ದಾಸರು ಹಾಡಿದ ಮತ್ತೊಂದು ನಾರಸಿಂಹ ಕ್ಷೇತ್ರ ಸಿಂಹಾಚಲ ಆ ಕ್ಷೇತ್ರ ವಿಶಾಖ ಪಟ್ಟಣಕ್ಕೆ ಸಮೀಪದಲ್ಲಿರುವ ಪ್ರಸಿದ್ಧ ಕ್ಷೇತ್ರ. ಆಂಧ್ರವಾಗ್ಗೇಯಕಾರರಾದ ಕೃಷ್ಣಮಾಚಾರ್ಯರು ಅಲ್ಲಿ ವಾಸ ಮಾಡಿದವರೇ. ಬಸವಣ್ಣನ ಬಗ್ಗೆ ಅವರು ಸಿಂಹಗಿರಿ ವಚನಗಳನ್ನು ಹಾಡಿದ್ದಾರೆ. ಪುರಂದರದಾಸರು ಸಿಂಹಾಚಲಕ್ಕೆ ಹೋಗಿರಬಹುದು. 'ಜಯಮಂಗಳಂ ನಿತ್ಯ ಶುಭ ಮಂಗಳಂ' ಕೃತಿಯಲ್ಲಿ

ಮಂಗಳವು ಮದನ ಕೋಟಿ ಕಾಂತಿಗೆ
ಮಂಗಳವು ಕರುಣಾಂತರಂಗ ಶ್ರೀರಂಗಗೆ
ಮಂಗಳವು ಸಿಂಹಾದ್ರಿ ನರಸಿಂಹಗೆ

ಎಂದು ಮಂಗಳ ಹಾಡಿದ್ದಾರೆ.

ದಾಸರು ಹಾಡಿದ ರಾಮಕ್ಷೇತ್ರಗಳಲ್ಲಿ ಭದ್ರಾಚಲವೂ ಒಂದು. ಆಂಧ್ರದೇಶದ ಪಶ್ಚಿಮ ಗೋದಾವರಿ ಜಿಲ್ಲೆಯಲ್ಲಿ ಪ್ರಸಿದ್ಧ ಕ್ಷೇತ್ರ. ಆಂಧ್ರವಾಗ್ಗೇಯಕಾರರಾದ ರಾಮದಾಸರು ಬಾಳಿದ ಊರು ಅದು. ಸ್ವಾಮಿಗಾಗಿ ಸರ್ಕಾರದ ಹಣವನ್ನು ವೆಚ್ಚ ಮಾಡಿ ಹನ್ನೆರಡು ವರ್ಷ ಕಾರಾಗಾರವಾಸ ಮಾಡಿದ ಭಕ್ತರು, ಆದರೆ ಅವರು 16-17 ನೇ ಶತಾಬ್ದದವರು. ಪುರಂದರದಾಸರ ಪದಗಳನ್ನು ಪರಿಶೀಲನೆ ಮಾಡಿದರೆ ಅವರ ಕಾಲದಲ್ಲಿ ಈ ಕ್ಷೇತ್ರ ಪ್ರಸಿದ್ಧಿ ಹೊಂದಿರಬಹುದು ಎಂದು ತಿಳಿಯುತ್ತದೆ, 'ಬಾರಯ್ಯ ಮನೆಗೆ ರಂಗಯ್ಯ ನೀನು' ಪದದಲ್ಲಿ

ಅನಂತ ಪದುಮನಾಭ ಅಪ್ರಮೇಯ
ಹೃಷೀಕೇಶ
ದಾನವಾಂತಕ ರಂಗ ದಶರಥ ಪುತ್ರ
ರಾಮ
ಪರಮ ಪವಿತ್ರ ರಾಮ ಭದ್ರಾಚಲಾಧೀಶ
ವರದ ಶ್ರೀ ಪುರಂದರ ವಿಠಲ ರಾಮ"

ಎಂದು ರಾಮದೇವರನ್ನು ಹೊಗಳಿದ್ದಾರೆ.

ಸಾಮಾನ್ಯರಿಗೆ ಪ್ರಾಂತ ಭೇದಗಳು. ಭಕ್ತರಿಗೆ ದೇವರು ಸಾಕ್ಷಾತ್ಕರಿಸಿದ ಪ್ರದೇಶಗಳೆಲ್ಲವೂ ಆರಾಧ್ಯವೇ.

---

**ಸಪ್ತಗಿರಿಯ ಬಗ್ಗೆ**
**ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

---

# ತೊಂಡಮಂಡಲದ ವಿಷ್ಣುಕ್ಷೇತ್ರಗಳು

ಮದ್ರಾಸ್, ಕಂಚಿಗಳ ಸುತ್ತಮುತ್ತಲ ಪ್ರದೇಶವನ್ನು ಹಿಂದೆ ತೊಂಡಮಂಡಲ ಎನ್ನುವ ರೂಢಿ ಇತ್ತು. ಇಂದಿಗೂ ಅದೇ ರೂಢಿ. ಈ ಎರಡೂ ಮಹಾನಗರಗಳ ಸುತ್ತಮುತ್ತ ಸುಮಾರು 22 ಪುಣ್ಯ ವಿಷ್ಣುಕ್ಷೇತ್ರಗಳಿವೆ. ಮದ್ರಾಸ್ ಅಥವಾ ಕಂಚಿಗಳನ್ನು ಕೇಂದ್ರವಾಗಿಟ್ಟುಕೊಂಡು ಈ ಪುಣ್ಯಕ್ಷೇತ್ರಗಳನ್ನು ದರ್ಶಿಸಬಹುದು. ವಾಹನ ಹಾಗೂ ವಸತಿ ಸೌಕರ್ಯಗಳು ಹೇರಳವಾಗಿರುವುದರಿಂದ ಯಾತ್ರಾರ್ಥಿಗಳು ಹೋಗಿ ಬರುವುದರಲ್ಲಿ ಯಾವುದೇ ರೀತಿಯ ಅನಾನುಕೂಲವೂ ಇಲ್ಲ. ಕಂಚಿಯು ಪುರಾತನ ನಗರವಾಗಿರುವುದರಿಂದ ಮದ್ರಾಸ್‌ಗಿಂತಲೂ ಈ ನಗರದ ಸುತ್ತಮುತ್ತ ಈ ಕ್ಷೇತ್ರಗಳು ಹೆಚ್ಚಾಗಿ ಹರಡಿವೆ.

## ಕಂಚಿಯ ಸುತ್ತಮುತ್ತ

ಕಂಚಿ ಅಥವಾ ಕಾಂಚೀ ಪುರವು ಐತಿಹಾಸಿಕವಾಗಿ, ಧಾರ್ಮಿಕವಾಗಿ ಹಾಗೂ ಇತ್ತೀಚಿಗೆ ಕೈಗಾರಿಕೆಗಳ ದೃಷ್ಟಿಯಿಂದ ವಿಸ್ತಾರವಾಗಿ ಬೆಳೆದಿರುವ ನಗರ, ಆಧುನಿಕತೆ ಹಾಗೂ ಪ್ರಾಚೀನತೆ– ಎರಡನ್ನೂ ಒಗ್ಗೂಡಿಸಿಕೊಂಡಿದೆ. ಈ ನಗರದಲ್ಲಿ ಕೆಲವೆಡೆ ವಿಷ್ಣು ದೇವಾಲಯಗಳು, ಬೇರೆಡೆ ಶಿವ ದೇವಾಲಯಗಳು ಹೆಚ್ಚಾಗಿರುವುದರಿಂದ, ಈ ದೃಷ್ಟಿಯಿಂದಲೇ ವಿಷ್ಣು ಕಂಚಿ, ಶಿವಕಂಚಿ ಎಂಬುದಾಗಿ ಎರಡು ಭಾಗಗಳನ್ನಾಗಿ ಈ ನಗರವನ್ನು ವಿಭಾಗಿಸಲಾಗಿದೆ.

ವಿಷ್ಣು ಕಂಚಿಯನ್ನು ಚಿಕ್ಕ ಕಂಚಿ ಎಂಬುದಾಗಿಯೂ ಕರೆಯುತ್ತಾರೆ. ಇಲ್ಲಿ ಹಸ್ತಗಿರಿ, ತಿರುವೆಕ್ಕಾಡು, ತಿರುತ್ತಣ್ಕಾ, ಅಷ್ಟಭುಜಂ, ವೇಳುಕ್ಕಾ ಎನ್ನುವ ಐದು ದಿವ್ಯ ದೇಶಗಳಿವೆ.

ಶಿವ ಕಂಚಿಯನ್ನು ದೊಡ್ಡ ಕಂಚಿ ಎಂಬುದಾಗಿಯು ಕರೆಯುತ್ತಾರೆ. ಇಲ್ಲಿ ಊರಗಂ, ನೀರಗಂ, ಕಾರಗಂ ಇತ್ಯಾದಿ ಒಂಬತ್ತು ದಿವ್ಯದೇಶಗಳಿವೆ.

ಹಿಂದೆ ಕಂಚಿಯಲ್ಲಿ 18 ವಿಷ್ಣು ಆಲಯಗಳು, 23 ತೀರ್ಥಗಳು, 6 ನದಿಗಳು ಇದ್ದುವೆಂದು ಹೇಳುತ್ತಾರೆ.

## ಚಿಕ್ಕ ಕಂಚಿ

ಇಲ್ಲಿನ ಐದು ದಿವ್ಯದೇಶಗಳಲ್ಲಿ 'ಹಸ್ತಿಗಿರಿ' ಮುಖ್ಯವಾದುದು. ಇಲ್ಲಿ ಕಂಚಿ ವರದರಾಜಸ್ವಾಮಿ ಸನ್ನಿಧಿ ಇದೆ. ಅನೇಕ ಆಳ್ವಾರರ, ಆಚಾರ್ಯರ ಆರಾಧ್ಯದೈವವಿದು. ಬೃಹತ್ತಾದ, ಅನೇಕ ಪೌರಾಣಿಕ, ಧಾರ್ಮಿಕ ಘಟನೆಗಳನ್ನು ಹೊಂದಿರುವ ಈ ದೇವಾಲಯದಲ್ಲಿ ವೈಯಾಶಿ ತಿಂಗಳಲ್ಲಿ ಚಿತ್ತಾ ನಕ್ಷತ್ರದದಿನ ಬಹಳ ವೈಭವದಿಂದ ನಡೆಯುವ ಧ್ವಜಾರೋಹಣ, ಚಿತ್ರಾ ಪೌರ್ಣಮಿಯಂದು ನಡೆಯುವ ಅಯ್ಯಂಕುಳಂ ನಡಬಾವಿ ಉತ್ಸವಗಳು ನೋಡಲು ಯೋಗ್ಯವಾದವುಗಳು. ಇಲ್ಲಿ ವರದರಾಜ ಪೆರುಮಾಳ್ ಹಾಗೂ ಪೆರುಂದೇವಿ ತಾಯಾರ್‌ರವರಿದ್ದಾರೆ. ಪುಣ್ಯ ಕೋಟಿ ವಿಮಾನ ಸತ್ಯವ್ರತ ಕ್ಷೇತ್ರ, ಅನಂತ ಸರಸ್ಸು, ಶೇಷ ತೀರ್ಥ, ಇತ್ಯಾದಿ ಆರು ತೀರ್ಥಗಳು, ವೇಗವತಿ ನದಿ ಇಲ್ಲಿವೆ. ಪಶ್ಚಿಮ ತಿರುಮುಖಮಂಡಲ ನಿಂತ ನಿಲುವನ್ನು ಹೊಂದಿರುವ ಈ ದೇವರು ನಾರದ, ಗಜೇಂದ್ರ, ಬ್ರಹ್ಮರಿಗೆ ಪ್ರತ್ಯಕ್ಷ. ಪೂದತ್ತಾಳ್ವಾರ್, ತಿರುಮಂಗೈ ಆಳ್ವಾರರು ಪ್ರಧಾನವಾಗಿ ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ. ಇಲ್ಲಿನ ಗರುಡೋತ್ಸವ ಪ್ರಸಿದ್ಧವಾದುದು.

ತಿರುವೆಕ್ಕಾಡು ಅಥವಾ 'ಯಥೋತ್ಕಾರಿ' ಸನ್ನಿಧಿಯು ಚಿಕ್ಕ ಕಂಚಿಯಲ್ಲಿನ ಎರಡನೆ ಪುಣ್ಯ ಕ್ಷೇತ್ರ. ವರದರಾಜಪೆರುಮಾಳ್ ಸನ್ನಿಧಿಗೆ ಪಶ್ಚಿಮದಲ್ಲಿ ಅರ್ಧ ಮೈಲಿ ದೂರದಲ್ಲಿ ಈ ಕ್ಷೇತ್ರವಿದೆ. ಪಂಗುನಿ ಮಾಸದಲ್ಲಿ ರೇವತಿ ನಕ್ಷತ್ರದ ದಿನದಿಂದ ಹತ್ತು ದಿನಗಳವರೆಗೆ ಬ್ರಹ್ಮೋತ್ಸವವು ಜರುಗುವುದು. ಶೊನ್ನವಣ್ಣಂಶೆಯ್ದ (ಯಥೋತ್ಕಾರಿ) ಪೆರುಮಾಳ್, ಕೋಮಲವಲ್ಲಿ ನಾಚ್ಚಿಯಾರ್ ಇರುವ ಈ ಕ್ಷೇತ್ರವನ್ನು ಪೊಯ್‌ಗೈ, ಪೇಯಾಳ್ವಾರ್, ತಿರುಮಂಗೈ ಆಳ್ವಾರ್, ತಿರುಮಳಿಶೈ ಆಳ್ವಾರ್‌ರವರುಗಳು ಹಾಡಿ ಹೊಗಳಿದ್ದಾರೆ.

ವರದರಾಜಪೆರುಮಾಳ್ ಸನ್ನಿಧಿಗೆ ಪಶ್ಚಿಮದಲ್ಲಿ ಮುಕ್ಕಾಲು ಮೈಲಿ ದೂರದಲ್ಲಿ 'ಅಷ್ಟಭುಜಂ' ಅಥವಾ 'ಅಷ್ಟಭಯಕರಂ' ಎನ್ನುವ ಮೂರನೆ ದಿವ್ಯ ದೇಶವಿದೆ. ಆದಿ ಕೇಶವ ಪೆರುಮಾಳ್, ಚಕ್ರಧರ, ಅಲರ್‌ಮೇಲ್‌ಮಂಗನಾಚ್ಚಿಯಾರ್ ರಿಂದ ಕೂಡಿರುವ ಈ ಕ್ಷೇತ್ರವನ್ನು ಪೇಯಾಳ್ವಾರ್ ಮತ್ತು ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ. ಇಲ್ಲಿನ ಅಷ್ಟಭಯಂಕರ ನರಸಿಂಹ ಸ್ವಾಮಿ ಸನ್ನಿಧಿಯೂ ಪ್ರಸಿದ್ಧವಾದುದು.

ಇಲ್ಲಿ ನಾಲ್ಕನೆಯ ಕ್ಷೇತ್ರ 'ವೇಳುಕ್ಕಾ'. ಇಲ್ಲಿ ಮುಕುಂದ ನಾರಾಯಣ, ವೇಳುಕ್ಕೈವಲ್ಲಿನಾಚ್ಚಿ



ಒಂದು ವಿಷ್ಣು ಕ್ಷೇತ್ರದ ದಿವ್ಯ ಮೂರ್ತಿಗಳು

'ರಘುಸುತ'

ಯಾರ್‌ರವರುಗಳು ಇದ್ದು, ಕನಕ ವಿಮಾನ, ಕನಕ ಸರಸ್ಸುಗಳನ್ನು ಈ ಕ್ಷೇತ್ರ ಒಳಗೊಂಡಿದೆ.

ಅಷ್ಟಭುಜ ಸನ್ನಿಧಿಗೆ ಪಶ್ಚಿಮದಲ್ಲಿ ಎರಡು ಫರ್ಲಾಂಗ್ ದೂರದಲ್ಲಿ 'ತಿರುವಣ್ಣಾ' ಅಥವಾ 'ವಿಳಕ್ಕೊಳಿ ಕೋಯಿಲ್' ಎನ್ನುವ ಐದನೆಯ ದಿವ್ಯ ಕ್ಷೇತ್ರವಿದೆ. ವಿಳಕ್ಕೊಳಿ, ದೀಪ ಪ್ರಕಾಶರ್, ಮರಕತವಲ್ಲಿ ತಾಯಾರ್, ಶ್ರೀಕರ ವಿಮಾನ, ಸರಸ್ವತಿ ತೀರ್ಥಗಳಿಂದ ಕೂಡಿರುವ ಈ ದಿವ್ಯ ದೇಶವನ್ನು ಪೂದತ್ತಾಳ್ವಾರ್, ತಿರುಮಂಗೈ ಆಳ್ವಾರ್‌ರವರು ಹಾಡಿ ಹೊಗಳಿದ್ದಾರೆ.

## ದೊಡ್ಡ ಕಂಚಿ

ಒಳ್ಳಿನ ಒಂಬತ್ತು ವಿಷ್ಣು ಕ್ಷೇತ್ರಗಳಲ್ಲಿ 'ಊರಗಮ್' ಅಥವಾ 'ಉಲಗಳನ್ದ ಪೆರುಮಾಳ್' ಮೊದಲನೆಯದು. ಕಾಮಾಕ್ಷಿದೇವಾಲಯದ ಸಮೀಪದಲ್ಲಿದೆ. ಉಲಗಳಂದ ಪೆರುಮಾಳ್, ತ್ರಿವಿಕ್ರಮ, ಅಮುದವಲ್ಲಿತಾಯಾರ್ – ಇಲ್ಲಿನ ಸನ್ನಿಧಿಯಲ್ಲಿದ್ದಾರೆ. ಸಾರ ಶ್ರೀಕರ ವಿಮಾನ, ನಾಗತೀರ್ಥಗಳನ್ನು ಹೊಂದಿರುವ ಇಲ್ಲಿ ಸ್ವಾಮಿಯು ಊರಗ ಮುನಿಗೆ, ಆದಿಶೇಷನಿಗೆ ಪ್ರತ್ಯಕ್ಷನಾಗಿದ್ದಾನೆ. ತಿರುಮಳಿಶೈ ಆಳ್ವಾರರು ಇಲ್ಲಿ ಮಂಗಳಾ ಶಾಸನ ಮಾಡಿದ್ದಾರೆ.

ಎರಡನೆ ವಿಷ್ಣು ಕ್ಷೇತ್ರ 'ನೀರಗಂ' ಉಲಗಳನ್ದ ಪೆರುಮಾಳ ಸನ್ನಿಧಿಯ ಉತ್ತರ ಪ್ರಾಕಾರದಲ್ಲಿದೆ. ಜಗದೀಶ ಪೆರುಮಾಳ್, ನೀಲಮಂಗವಲ್ಲಿ ತಾಯಾರ್ ಇಲ್ಲಿದ್ದಾರೆ. ಅಕ್ರೂರ ಮಹರ್ಷಿಗೆ ದರ್ಶನ, ತಿರುಮಂಗೈ ಆಳ್ವಾರ್ ಮಂಗಳಾಶಾಸನ ಮಾಡಿದ್ದಾರೆ.

ದೊಡ್ಡ ಕಂಚಿಯಲ್ಲಿನ ಮೂರನೆಯ ವಿಷ್ಣು ಕ್ಷೇತ್ರ 'ಕಾರಗಂ', ಉಲಗಳನ್ದ ಪೆರುಮಾಳ್ ಸನ್ನಿಧಿಯಲ್ಲಿನ ತಾಯಾರ್ ಸನ್ನಿಧಿಗೆ ಎದುರಾಗಿ ಈ ಕ್ಷೇತ್ರವಿದೆ. ಕರುಣಾಕರಪೆರುಮಾಳ್, ಪದ್ಮಾಮಣಿ ನಾಚ್ಚಿಯಾರ್‌ಗಳಿರುವ ಈ ಸನ್ನಿಧಿಯಲ್ಲಿ ಗಾರ್ಗ ಋಷಿಗೆ ದೇವರು ಪ್ರತ್ಯಕ್ಷವಾಗಿದ್ದಾರೆ. ತಿರುಮಂಗೈ ಆಳ್ವಾರರು ಮಂಗಳಾ ಶಾಸನ ಮಾಡಿದ್ದಾರೆ.

ಕಾಮಾಕ್ಷಿ ದೇವಾಲಯದಿಂದ ಅರ್ಧಮೈಲಿ ದೂರದಲ್ಲಿ ನಾಲ್ಕನೆಯ ವಿಷ್ಣುಕ್ಷೇತ್ರವಾದ 'ಪವಳ ವಣ್ಣಂ' ಇದೆ. ಪಕ್ಕದಲ್ಲಿಯೆ ಪಚ್ಚವಣ್ಣರ್ ಸನ್ನಿಧಿಯೂ ಇದೆ. ಪವಳವಣ್ಣಪೆರುಮಾಳ್, ಪವಳವಲ್ಲಿ ನಾಚ್ಚಿಯಾರ್‌ರವರಿಂದ ಕೂಡಿರುವ ಈ ಸನ್ನಿಧಿಯನ್ನು ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿ ವರ್ಣಿಸಿದ್ದಾರೆ. ಪಚ್ಚವಣ್ಣರ್ ಪೆರುಮಾಳ್, ಮರಕತವಲ್ಲಿ ತಾಯಾರ್‌ರಿಂದ ಕೂಡಿರುವ ಪಚ್ಚವಣ್ಣರ್ ಸನ್ನಿಧಿಯಲ್ಲಿ ದೇವರು ಭೃಗುಮಹರ್ಷಿಗೆ ಪ್ರತ್ಯಕ್ಷವಾಗಿದ್ದಾರೆ.

ಕಾಮಾಕ್ಷಿ ದೇವಾಲಯದ, ಆವರಣದಲ್ಲಿ ಐದನೆಯ ವಿಷ್ಣುಕ್ಷೇತ್ರವಾದ 'ತಿರುಕ್ಕಳ್ವನೂರ್' ಇದೆ. ಶೈವರೂ ಇದನ್ನು ಆರಾಧಿಸುತ್ತಾರೆ. ಭೂಮಿಯನ್ನು ಚಾಪೆಯಂತೆ ಸುತ್ತಿ ಪಾತಾಳಕ್ಕೆ ಕೊಂಡೊಯ್ದ ಹಿರಣ್ಯಾಕ್ಷನನ್ನು ಕೊಂದು ಭೂದೇವಿಯನ್ನು ಉದ್ಧರಿಸಿದ ಸಮಯದ ಭಾವದಲ್ಲಿ ಇಲ್ಲಿನ ದೇವರು ದಯಮಾಡಿಸಿದ್ದಾರೆ. ಆದಿವರಾಹಪೆರುಮಾಳ್, ಅಂಜಿಲೈವಲ್ಲಿ ನಾಚ್ಚಿಯಾರ್, ವಾಮನ ವಿಮಾನವನ್ನು

( 25ನೇ ಪುಟ ನೋಡಿ )

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ನಳ-ದಮಯಂತಿ

ಶ್ರೀ ಎ. ಎಸ್. ಮಂಜುನಾಥ

ನಿಷಧದೇಶವನ್ನು ವೀರಸೇನನೆಂಬ ರಾಜನು ಆಳುತ್ತಿದ್ದನು. ಅವನು ಮುದುಕನಾಗಲು ಅವನ ಮಗ ನಳನು ಪಟ್ಟಕ್ಕೆ ಬಂದನು. ಯುವಕನಾದ ನಳನು ಅತ್ಯಂತ ತೇಜಸ್ಸಿನಿಂದ ಕೂಡಿದವನಾಗಿದ್ದನು. ಮಹಾಬಲಶಾಲಿಯಾದ ಆತನ ಯುದ್ಧನೈಪುಣ್ಯ ಎಲ್ಲರೂ ಮೆಚ್ಚುವಂತಿತ್ತು. ಅಶ್ವಪರೀಕ್ಷೆಯಲ್ಲಿ ಅವನನ್ನು ಮೀರಿಸುವವರೇ ಇರಲಿಲ್ಲ. ಅವನು ಕರ್ತವ್ಯನಿಷ್ಠನೂ, ಪ್ರಾಮಾಣಿಕನೂ ಆಗಿದ್ದನಲ್ಲದೆ ಅತ್ಯಂತ ಚೆಲುವನೂ ಆಗಿದ್ದನು.

ಪ್ರಾಯ ಪ್ರಬುದ್ಧನಾದ ನಳನಿಗೆ ದಮಯಂತಿಯೇ ಅನುರೂಪಳಾದ ಪತ್ನಿಯೆಂದು ಗೂಢಚಾರರು ತಿಳಿಸಿದರು. ದಮಯಂತಿಯು ವಿದರ್ಭದೇಶದ ಭೀಮರಾಜನ ಮಗಳು. ದಮಯಂತಿಯು ಕೃಶನಾದ ಶರೀರದಿಂದ ಕೂಡಿದ್ದು ಸುಂದರಿಯಾಗಿದ್ದಳು. ಅವಳ ಸೌಂದರ್ಯವನ್ನು ನೋಡಿದವರು, 'ಈಕೆ ಗಂಧರ್ವಳೋ, ಅಪ್ಸರೆಯೋ ಅಲ್ಲ ದೇವತೆಯೇ ಇಲ್ಲಿ ಅವತರಿಸಿದ್ದಾಳೋ ?' ಎಂದುಕೊಳ್ಳುತ್ತಿದ್ದರು. ಗೂಢಚಾರರು ದಮಯಂತಿಗೂ ನಳನ ಸೌಂದರ್ಯವನ್ನು ತಿಳಿಸಿದರು. ಇದರಿಂದ ನಳದಮಯಂತಿಯರಲ್ಲಿ ಪರಸ್ಪರ ಪ್ರೇಮಾಂಕುರವಾಯಿತು.

ಒಮ್ಮೆ ನಳನು ಉದ್ಯಾನವನದಲ್ಲಿ ವಿಹರಿಸುತ್ತಿದ್ದಾಗ ರಾಜಹಂಸವೊಂದು ಅವನ ಕೈಗೆ ಸಿಕ್ಕಿತು. ಅದಕ್ಕೆ ಮನುಷ್ಯರಂತೆ ಮಾತಾಡುವ ವಿಶೇಷಗುಣವಿದ್ದಿತು. ತನ್ನನ್ನು ಕೊಲ್ಲಬಹುದೆಂದು ತಿಳಿದು ಅದು ನಳನಲ್ಲಿ ಈ ರೀತಿ ಹೇಳಿತು – "ಎಲೈ, ಮಹಾರಾಜನೆ! ನನ್ನನ್ನು ಕೊಲ್ಲದೆ ಬಿಟ್ಟುಬಿಟ್ಟರೆ ನಿನಗೆ ಉಪಕಾರವನ್ನು ಮಾಡುವೆನು. ಭೀಮರಾಜನ ಮಗಳಾದ ಚೆಲುವೆ ದಮಯಂತಿಯು ನಿನ್ನನ್ನು ಒಲಿಯುವಂತೆ ಮಾಡುವೆನು". ರಾಜಹಂಸದ ಮಾತುಗಳನ್ನು ಕೇಳಿ ನಳನು ಅದನ್ನು ಕೊಲ್ಲದೆ ಬಿಟ್ಟುಬಿಟ್ಟನು. ರಾಜಹಂಸವು ಬಳಿಕ ದಮಯಂತಿಯ ಉದ್ಯಾನಕ್ಕೆ ಹೋಯಿತು. ಹಲವು ಪಕ್ಷಿಗಳೊಡನಿದ್ದ ರಾಜಹಂಸವನ್ನು ದಮಯಂತಿಗೆ ಹಿಡಿದುಕೊಳ್ಳಬೇಕೆನಿಸಿತು. ಅವಳ ಸಖಿಯರು ಬೇರೆ ಪಕ್ಷಿಗಳನ್ನು ಹಿಡಿಯಲು ಹೋದಾಗ ರಾಜಹಂಸವು ದಮಯಂತಿಯ ಕೈಗೆ ಸಿಕ್ಕಿತು. ಅದು ನಳಮಹಾರಾಜನ ಗುಣಗಾನಮಾಡಿತು; ಅವನ ಸೌಂದರ್ಯವನ್ನು ಬಣ್ಣಿಸಿತು.

ದಮಯಂತಿಗೆ ನಳನನ್ನು ಸೇರಬೇಕೆಂಬ ಹಂಬಲ ದಿನದಿನವೂ ಹೆಚ್ಚಾಯಿತು. ಎಲ್ಲೆಡೆಯಲ್ಲೂ ಆಕೆ ನಳನನ್ನೇ ಕಾಣುತ್ತಿದ್ದಳು. ತಂದೆ ಭೀಮರಾಜನು ಯೌವನೆಯಾದ ದಮಯಂತಿಗೆ ಈಗ ವಿವಾಹಮಾಡುವುದು ತನ್ನ ಕರ್ತವ್ಯನೆಂದು ಬಗೆದು ಎಲ್ಲಾ ರಾಜರುಗಳಿಗೂ ದೇವತೆಗಳಿಗೂ ವಿವಾಹದ ಆಮಂತ್ರಣವನ್ನಿತ್ತನು.

ದಮಯಂತಿಯ ಸ್ವಯಂವರಕ್ಕೆ ದೇಶವಿದೇಶಗಳಿಂದ ರಾಜರುಗಳು ಬಂದರು. ಲೋಕಪಾಲಕರಾದ ಇಂದ್ರ, ವರುಣ, ಅಗ್ನಿ, ಯಮಾದಿಗಳೂ ಪ್ರಯಾಣ ಬೆಳೆಸಿದರು. ದಾರಿಯಲ್ಲಿ ನಳನ ಭೇಟಿಯಾಯಿತು. ತಮಗೆ ಸಹಾಯ ಮಾಡಬೇಕೆಂದಾಗ ಒಡನೆಯೇ 'ಆಗಲಿ' ಎಂದನು. ತಮ್ಮಲ್ಲೊಬ್ಬರನ್ನು ದಮಯಂತಿಯು ಹಾರ ಹಾಕಿ ವಿವಾಹವಾಗಬೇಕು ಎಂದು ಅವಳಲ್ಲಿ ಹೇಳಬೇಕೆಂದರು. ಕೊಟ್ಟ ಮಾತಿಗೆ ತಪ್ಪಲು ನಳನಿಗೆ ಇಷ್ಟವಾಗಲಿಲ್ಲ. ಲೋಕಪಾಲಕರು ಕಾವಲುಗಾರರಿಗೆ ಕಾಣದಂತೆ ದಮಯಂತಿಯನ್ನು ಅವನು ಭೇಟಿಮಾಡುವಂತೆ ನೆರವಾದರು. ಅದರಂತೆ ನಳನು ದಮಯಂತಿಯನ್ನು ಸಂಧಿಸಿ ವಿಷಯ ತಿಳಿಸಿದನು. ಆದರೆ ದಮಯಂತಿಯು ನಳನನ್ನು ಬಿಟ್ಟು ಇನ್ನಾರನ್ನೂ ಒಲ್ಲೆನೆಂದಳು. ನಳನು ಬಂದು ದಮಯಂತಿಯ ಮನಸ್ಸನ್ನು ಲೋಕಪಾಲಕರಿಗೆ ತಿಳಿಸಿದನು.

ಸ್ವಯಂವರಕ್ಕಾಗಿ ದಮಯಂತಿಯು ಮಾಲೆ ಹಿಡಿದುಕೊಂಡು ನಿಂತಳು. ನಳನಿಗಾಗಿ ಹುಡುಕಾಡಿದಳು. ಆದರೆ ಅಲ್ಲಿ ಅವಳು ಐವರು ನಳರನ್ನು ಕಂಡಳು. ಲೋಕಪಾಲಕರೇ ಅವರಲ್ಲಿ ನಾಲ್ಕು ಜನವಿರಬೇಕೆಂದು ಅಂದುಕೊಂಡಳು. ಬಳಿಕ ಅವರನ್ನು ಸ್ತುತಿಸಿದಳು. ಲೋಕಪಾಲಕರು ತಮ್ಮ ನಿಜರೂಪವನ್ನು ಪ್ರಕಟಿಸಿದರು. ಆಗ ಹಾರವನ್ನು ನಳನಿಗೆ ಹಾಕಿ ಅವನನ್ನು ವರಿಸಿದಳು. ಕೆಲವು ದಿನಗಳು ಕಳೆದ ಬಳಿಕ ನಳನು ತನ್ನ ರಾಜ್ಯಕ್ಕೆ ಪತ್ನೀಸಹಿತ ತೆರಳಿದನು. ಅವರಿಗೆ ಇಂದ್ರಸೇನ ಎಂಬ ಪುತ್ರನೂ, ಇಂದ್ರಸೇನಾ ಎಂಬ ಪುತ್ರಿಯೂ ಜನಿಸಿದರು.

ದಮಯಂತಿಯನ್ನು ಮದುವೆಯಾದ ವಿಚಾರವನ್ನು ಲೋಕಪಾಲಕರಿಂದ ತಿಳಿದ ಕಲಿಗೆ ನಳನ ಮೇಲೆ ಕೋಪ ಬಂದಿತು: ನಳನನ್ನು ರಾಜ್ಯಭ್ರಷ್ಟನನ್ನಾಗಿ ಮಾಡಬೇಕೆಂದು ಹಟತೊಟ್ಟನು.

ಕಲಿಪ್ರವೇಶಗೊಂಡ ನಳನು ತಮ್ಮ ಪುಷ್ಕರನೊಡನೆ ಜೂಜಾಡಲು ತೊಡಗಿದನು. ಆಟಗಳಲ್ಲಿ ಅದೃಷ್ಟದ ಒಲವು ಪುಷ್ಕರನ ಕಡೆಗಿತ್ತು. ಅನೇಕ ವಸ್ತುಗಳನ್ನು ಜೂಜಿನಲ್ಲಿ ಕಳೆದನಂತರ ದಮಯಂತಿಯು ನಳನ ಮನಸ್ಸನ್ನು ಜೂಜಾಟದ ಕಡೆಯಿಂದ ಬೇರ್ಪಡಿಸಲು ಪ್ರಯತ್ನಿಸಿದಳು. ಆದರೆ ನಳನು ಜೂಜಾಟದಿಂದ ಎಳ್ಳಷ್ಟೂ ವಿಚಲಿತನಾಗಲಿಲ್ಲ. ದಮಯಂತಿಯು ಮಕ್ಕಳನ್ನು ತನ್ನ ತಂದೆ ಭೀಮರಾಜನಲ್ಲಿಗೆ ಕಳುಹಿಸಿದಳು. ಕೊನೆಯ ಪಣವಾದ ರಾಜ್ಯವೂ ಪುಷ್ಕರನ ಪಾಲಾದಾಗ ಪತ್ನೀಸಮೇತನಾಗಿ ಕಾಡಿಗೆ ಹೋಗಲೇಬೇಕಾಯಿತು.

ಉಟ್ಟ ವಸ್ತ್ರಗಳನ್ನು ಬಿಟ್ಟು ಅವರಿಗೆ ಬೇರೇನೂ ಇರಲಿಲ್ಲ. ಕಾಡಿನಲ್ಲಿ ಪಕ್ಷಿಗಳನ್ನು ಕಂಡು ಆದಿನದ ಊಟಕ್ಕಾಯಿತೆಂದು ತನ್ನ ವಸ್ತ್ರವನ್ನೇ ಬಲೆಯಾಗಿ ಉಪಯೋಗಿಸಿ ಅವುಗಳನ್ನು ಹಿಡಿಯಲು ನಳನು ಯತ್ನಿಸಿದನು. ಆದರೆ ಪಕ್ಷಿಗಳು ವಸ್ತ್ರವನ್ನೇ ಸೆಳೆದುಕೊಂಡು ಆಕಾಶದಲ್ಲಿ ಹಾರಲು ನಳನು ವಿವಸ್ತ್ರನಾದನು. ಕಾಡಿನಲ್ಲಿ ಅಲೆಯುತ್ತಾ ಮುಂದೆ ಬಂದಾಗ ಅವರಿಗೆ ಕಲ್ಲಿನ ಹಾಸಿಗೆಯೊಂದು ಗೋಚರವಾಯಿತು. ರಾತ್ರಿಯಾದ್ದರಿಂದ ಅಲ್ಲೇ ನಿದ್ದೆಹೋದರು. ದಮಯಂತಿಯ ವಸ್ತ್ರವನ್ನೇ ಇಬ್ಬರೂ ಹೊದೆದುಕೊಂಡರು.

ಮಧ್ಯರಾತ್ರಿಯ ಸಮಯ ಎಚ್ಚತ್ತ ನಳನು ತನ್ನಿಂದ ದಮಯಂತಿಗಾಗಬಹುದಾದ ಕಷ್ಟಗಳನ್ನು ಮನಸ್ಸಿನಲ್ಲೇ ತಿಳಿದು ಬೇಸರಪಟ್ಟನು. ತಾನು ಈಗ ಬಿಟ್ಟು ಹೊದರೆ ಅವಳು ತನ್ನ ತವರನ್ನು ಸೇರಬಹುದೆಂದು ತಿಳಿದು ದಮಯಂತಿಯ ವಸ್ತ್ರವನ್ನು ಅರ್ಧತುಂಡುಮಾಡಿ ತಾನುಟ್ಟುಕೊಂಡನು. ದಮಯಂತಿಯನ್ನು ಬಿಟ್ಟು ಹೋಗಲು ಮನಸ್ಸಿಲ್ಲದಿದ್ದರೂ ಆಕೆಯ ಕ್ಷೇಮವನ್ನು ನೆನೆದು ಬಿಟ್ಟುಹೋದನು.

ಬೆಳಗ್ಗೆ ಎಚ್ಚತ್ತ ದಮಯಂತಿ ತನ್ನ ಪ್ರಿಯನನ್ನು ಕಾಣದೆ ತಳಮಳಗೊಂಡಳು. ನಾನಾವಿಧವಾಗಿ ಪ್ರಲಾಪಿಸಿದರೂ ನಳನನ್ನು ಕಾಣದೆ ಹೋದಳು. ಮರಗಿಡ, ಪಕ್ಷಿಮೃಗ ಸಂಕುಲಗಳಲ್ಲಿ 'ನಳನನ್ನು ಕಂಡಿರಾ?' ಎಂಬ ಪ್ರಶ್ನೆಯನ್ನು ಕೇಳಿದಳು. ಆದರೆ ಅದಕ್ಕೆ ಉತ್ತರ ಬರಲಿಲ್ಲ. ತನ್ನ

ಗಂಡನು ತನ್ನನ್ನು ಬಿಟ್ಟು ಹೋಗಲು ಕಾರಣನಾದವನು ನಳನಿಗಿಂತಲೂ ಹೆಚ್ಚು ಕಷ್ಟಪಡಲಿ ಎಂದು ಶಾಪವಿತ್ತಳು. ದಮಯಂತಿ ಕಾಡಿನಲ್ಲಿ ಅಲೆಯುತ್ತಿರುವಾಗ ಸರ್ಪವೊಂದು ಅವಳನ್ನು ಸುತ್ತಿಕೊಂಡಿತು. ಅವಳು ಬೊಬ್ಬಿಡುವುದನ್ನು ಕೇಳಿದ ವ್ಯಾಧನೊಬ್ಬನು ತನ್ನ ಕತ್ತಿಯಿಂದ ಸರ್ಪವನ್ನು ಸೀಳಿ ಅವಳನ್ನು ರಕ್ಷಿಸಿದನು. ಅಬಲೆಯೆಂದು ತಿಳಿದೊಡನೆ ಆ ವ್ಯಾಧನು ದಮಯಂತಿಯನ್ನು ಬಲಾತ್ಕರಿಸಿದನು. ಕೋಪಗೊಂಡ ದಮಯಂತಿ ತನ್ನ ಪಾತಿವ್ರತ್ಯದಿಂದ ಅವನನ್ನು ನಾಶಪಡಿಸಿದಳು. ಮುಂದೆ ಕೆಲವು ವರ್ತಕರ ಸಹಾಯದಿಂದ ಚೇದಿರಾಜನ ಪಟ್ಟಣಕ್ಕೆ ಬಂದಳು. ರಾಜಮಾತೆಯು ಅವಳನ್ನು ಮಾತನಾಡಿಸಿದಳು. ಅಬಲೆಯೆಂದು ತಿಳಿದು ತನ್ನ ಅರಮನೆಯಲ್ಲೇ ಇರು ಎಂದಳು.

ದಮಯಂತಿಯನ್ನು ಬಿಟ್ಟು ಹೋದ ನಳನು ಕಾಡಿನಲ್ಲಿ ಮುಂದುವರಿಯುತ್ತಾ ಇರುವಾಗ ಕಾಳ್ಗಿಚ್ಚಿನ ಮಧ್ಯದಿಂದ ಆರ್ತನಾದ ಕೇಳಿಬಂತು. ಆ ಧ್ವನಿಯನ್ನನುಸರಿಸಿ ಬಂದಾಗ ಜ್ವಾಲೆಗಳ ಮಧ್ಯೆ ಸಿಲುಕಿದ ಘಟಸರ್ಪವೊಂದನ್ನು ಕಂಡನು. ನಳನಲ್ಲಿ ಅದು, "ನನ್ನನ್ನು ಈ ಜ್ವಾಲೆಗಳಿಂದ ಬೇರೆ ಸುರಕ್ಷಿತ ಪ್ರದೇಶಕ್ಕೆ ಕೊಂಡು ಹೋಗು" ಎಂದು ದೈನ್ಯವಾಗಿ ಬೇಡಿಕೊಂಡಿತು. ಅದರಂತೆ ನಳನು ಆ ಘಟಸರ್ಪವನ್ನು ಕಾಳ್ಗಿಚ್ಚಿನಿಂದ ಬೇರೆಡೆಗೆ ಕೊಂಡೊಯ್ದ ನಂತರ ಅದು ಅವನನ್ನು ಬಲವಾಗಿ ಕಚ್ಚಿತು. ಕೂಡಲೇ ನಳನ ಸುಂದರರೂಪ ಮಾಯವಾಗಿ ವಿಕಾರವಾಯಿತು. ಅನಂತರ ನಳನನ್ನು ಕುರಿತು ಸರ್ಪವು, "ಮಹಾರಾಜನೆ! ನನ್ನ ಹೆಸರು ಕರ್ಕೋಟಕ. ನನ್ನ ವಿಷದಿಂದ ನಿನಗೆ ಏನೂ ಅಪಾಯವಿಲ್ಲ. ನಾನು ಈ ರೀತಿ ಮಾಡಿದ್ದರಿಂದ ನಿನ್ನಲ್ಲಿರುವ ಕಲಿಯು ಕಷ್ಟವನ್ನನುಭವಿಸುವನು. ನೀನು ಇನ್ನು ಅಯೋಧ್ಯೆಯ ಋತುಪರ್ಣನಲ್ಲಿಗೆ ಹೋಗಿ 'ಬಾಹುಕ'ನೆಂಬ ಹೆಸರಿನಿಂದ ಅವನ ಸಾರಥಿಯಾಗು. ಈ ದಿವ್ಯಾಂಬರಗಳು ನಿನಗೆ ಪೂರ್ವರೂಪವನ್ನು ಕೊಡುವುವು" ಎಂದು ಹೇಳಿ ಎರಡು ದಿವ್ಯವಸ್ತ್ರಗಳನ್ನು ಕೊಟ್ಟಿತು.

ಕರ್ಕೋಟಕನು ಹೇಳಿದಂತೆ ನಳನು ತಡಮಾಡದೆ ಋತುಪರ್ಣನಲ್ಲಿಗೆ ಹೋದನು. ಅಶ್ವಪರೀಕ್ಷೆಯಲ್ಲಿ ತನ್ನ ಅಸಾಮಾನ್ಯ ಪ್ರತಿಭೆಯನ್ನರುಹಿ ಅವನ ಸಾರಥಿಯಾದನು. ವಾರ್ಷ್ಣೇಯ ಮತ್ತು ಜೀವಲರೆಂಬವರು ಅವನ ಸಹಾಯಕರಾದರು.

ನಳದಮಯಂತಿಯರು ರಾಜ್ಯಭ್ರಷ್ಟರಾಗಿ ಕಾಡಿನಲ್ಲಿ ಅಲೆದಾಡುತ್ತಿದ್ದಾರೆ ಎಂಬ ವಿಷಯ ಭೀಮರಾಜನಿಗೆ ತಿಳಿಯಿತು. ಅವನು ನಳದಮಯಂತಿಯರನ್ನು ಹುಡುಕುವುದಕ್ಕಾಗಿ ಬ್ರಾಹ್ಮಣರನ್ನು ಎಲ್ಲಾ ದೇಶಗಳಿಗೂ ಕಳುಹಿಸಿದನು. ಸುದೇವನೆಂಬ ಬ್ರಾಹ್ಮಣನು ಚೇದಿರಾಜನ ಅರಮನೆಯಲ್ಲಿ ದಮಯಂತಿಯನ್ನು ಕಂಡು ಮಾತನಾಡಿಸಿದನು. ದಮಯಂತಿಯ ವೃತ್ತಾಂತವನ್ನು ಕೇಳಿದ ಬಳಿಕ ತಾನು ಅವಳ ಚಿಕ್ಕಮ್ಮನೆಂದು ರಾಜಮಾತೆ ಹೇಳಿದಳು. ಆಮೇಲೆ ಸುದೇವನೊಡನೆ ದಮಯಂತಿ ತನ್ನ ತಂದೆಯ ಅರಮನೆಯನ್ನು ಸೇರಿದಳು.

ತನ್ನವರನ್ನು ಸೇರಿದ ದಮಯಂತಿ ನಳನಿಗಾಗಿ ಹಂಬಲಿಸಿದಳು. ಅವನ ಶೋಧನೆಗಾಗಿ ಬ್ರಾಹ್ಮಣರನ್ನು ಕರೆದು, "ಓ ಜೂಜುಕೋರ! ನಿನ್ನ ಪತ್ನಿಯ ಅರ್ಧ ಬಟ್ಟೆಯನ್ನು ಖಡ್ಗದಲ್ಲಿ ತುಂಡುಮಾಡಿ ಅವಳನ್ನು ಘೋರಾರಣ್ಯದಲ್ಲಿ ಏಕಾಕಿನಿಯಾಗಿ ಬಿಟ್ಟು, ಯಾಕೆ ಹೋದೆ? ಆಕೆ ನಿನ್ನ ಪುನರ್ಮಿಲನಕ್ಕಾಗಿ ಕಾಯುತ್ತಿದ್ದಾಳೆ" ಎಂದು ಎಲ್ಲೆಡೆಯಲ್ಲೂ ಸಾರಲು ಹೇಳಿದಳು. ಅದರಂತೆ ಬ್ರಾಹ್ಮಣರು ಎಲ್ಲೆಲ್ಲೂ ದಮಯಂತಿ ಹೇಳಿದ ಮಾತುಗಳನ್ನು ಹೇಳತೊಡಗಿದರು. ಅಯೋಧ್ಯೆಯ ಋತುಪರ್ಣನ ಸಾರಥಿಯು ಆ ಮಾತುಗಳನ್ನು ಕೇಳಿ ಬಹುವಾಗಿ ಸಂಕಟಪಟ್ಟದ್ದನ್ನು ಪರ್ಣಾದನೆಂಬ ಬ್ರಾಹ್ಮಣನು ಗುರುತಿಸಿ, ದಮಯಂತಿಗೆ ತಿಳಿಸಿದನು. ಇದನ್ನು ತಿಳಿದ ದಮಯಂತಿಯು ಸುದೇವನನ್ನು ಕರೆದು, "ನೀನು ಅಯೋಧ್ಯೆಗೆ ಹೋಗಿ, ದಮಯಂತಿಯು ತನ್ನ ಪತಿಗಾಗಿ ಶೋಧಿಸಿ ಅವನು ಇದ್ದಾನೋ ಇಲ್ಲವೋ ಎಂದು ತಿಳಿಯದಿರುವುದರಿಂದ ಪುನಃ ಸ್ವಯಂವರವಾಗಲು ಸಿದ್ಧಳಾಗಿದ್ದಾಳೆ. ನಾಳೆ ಬೆಳಗಾಯಿತೆಂದರೆ ಅವಳು ಇನ್ನೊಬ್ಬನನ್ನು ವರಿಸುತ್ತಾಳೆ" ಎಂದು ಋತುಪರ್ಣನಲ್ಲಿ ಹೇಳಲು ಕಳಿಸಿದಳು. ಸುದೇವನು ವಾಯುವೇಗದಿಂದ ಋತುಪರ್ಣನಲ್ಲಿಗೆ ಹೋಗಿ ವಿಷಯ ತಿಳಿಸಿದನು. ಋತುಪರ್ಣನು ದಮಯಂತಿಯ ಪುನಃ ಸ್ವಯಂವರವನ್ನು ಬಾಹುಕನಿಗೆ ತಿಳಿಸಿ ರಥಕ್ಕೆ ಅಶ್ವಗಳನ್ನು ಕಟ್ಟಲು ಹೇಳಿದನು.

ದಮಯಂತಿಯ ಮರುವಿವಾಹದ ಸುದ್ದಿ ಕೇಳಿ ನಳನಿಗೆ ಬೇಸರವಾದರೂ, ಅದನ್ನು ತೋರಿಸದೆ ಅಶ್ವಶಾಲೆಗೆ ಹೋಗಿ ಅವುಗಳ ಪರೀಕ್ಷೆಯಲ್ಲಿ ತೊಡಗಿದನು. ಋತುಪರ್ಣನು ಅವಸರ ಮಾಡಿದರೂ ಅವನು ಉತ್ತಮ ಕುದುರೆಗಳನ್ನು ಹುಡುಕುವುದರಲ್ಲೇ ತಲ್ಲೀನನಾಗಿದ್ದನು. ಕೊನೆಗೆ ಕೃಶವಾದ ಶರೀರದ ಕುದುರೆಗಳನ್ನು ರಥಕ್ಕೆ ಕಟ್ಟಿದನು. ಬಡಕಲು ಶರೀರದ ಕುದುರೆಗಳನ್ನು ಕಂಡು ಋತುಪರ್ಣನು ಒಂದು ದಿನದಲ್ಲಿ ವಿದರ್ಭದೇಶವನ್ನು ತಲುಪಲು ಅಸಾಧ್ಯವೆಂದು ಭಾವಿಸಿದರೂ ಬಾಹುಕನ ಅಶ್ವವಿದ್ಯೆಯ ಸಾಮರ್ಥ್ಯದ ಬಗ್ಗೆ ವಿಶ್ವಾಸವಿದ್ದುದರಿಂದ ಕೊನೆಗೆ ಅದೇ ಕುದುರೆಗಳನ್ನು ಕಟ್ಟಲು ಒಪ್ಪಿದನು. ರಾಜನು ಕುಳಿತೊಡನೆಯೇ ಬಾಹುಕನು ಋತುಪರ್ಣನಿಂದ ಸಂಖ್ಯಾಶಾಸ್ತ್ರ ಮತ್ತು ಅಕ್ಷವಿದ್ಯೆಯನ್ನು ಕಲಿತನು. ಅಕ್ಷವಿದ್ಯೆ ಕಲಿತೊಡನೆ ಬಾಹುಕನಲ್ಲಿದ್ದ ಕಲಿಯು ಹೊರಟು ಹೋದನು.

ನೂರು ಯೋಜನ ದೂರದ ವಿದರ್ಭವನ್ನು ಒಂದೇ ದಿನದಲ್ಲಿ ಋತುಪರ್ಣ ಮತ್ತು ಬಾಹುಕರು ಸೇರಿದರು. ಆದರೆ ಋತುಪರ್ಣನಿಗೆ ಯಾವ ರಾಜರೂ ಸೇರದೆ ಇರುವುದರಿಂದ ಆಶ್ಚರ್ಯವೆನಿಸಿತು. ಭೀಮರಾಜನು ತನ್ನ ಆತಿಥ್ಯವನ್ನು ಸ್ವೀಕರಿಸಿ ನಾಲ್ಕುದಿನ ಕಳೆದನಂತರ ಹೋಗಬಹುದೆಂದಾಗ ರಹಸ್ಯವನ್ನು ತಿಳಿಯುವುದಕ್ಕಾಗಿ ಒಪ್ಪಿದನು. ಅವರ ರಥದ ಗಾಲಿಗಳ ಶಬ್ದ ದಮಯಂತಿಗೆ ನಳನ ರಥದ ಗಾಲಿಗಳ ಶಬ್ದದಂತೆ ಕೇಳಿಸಿತು. ಆದರೆ ಮಾಳಿಗೆ ಮೇಲಿಂದ ನೋಡಿದಾಗ ನಳನನ್ನು ಕಾಣದೆ ಬೇಸರಪಟ್ಟಳು. ಆದರೂ ಅಧೀರಳಾಗದೆ, ಕೇಶಿನಿಯೆಂಬ ಸಖಿಯನ್ನು ಪರೀಕ್ಷೆಗಾಗಿ ಕಳುಹಿಸಿದಳು. ಪರ್ಣಾದನು ಹೇಳಿದಂತೆ ಕೇಶಿನಿಯೂ ಹೇಳಿದಾಗ ಬಾಹುಕನಿಗೆ ಅತೀವ ಸಂಕಟವಾಯಿತು.

ಈ ತೆರನಾಗಿ ಹಲವು ಪರೀಕ್ಷೆಗಳನ್ನು ಮಾಡಿ, ಬಾಹುಕನು ನಳನೇ ಎಂಬ ನಿರ್ಧಾರಕ್ಕೆ ಬಂದಳು. ಅನಂತರ ತನ್ನ ಮಕ್ಕಳನ್ನು ಕೇಶಿನಿಯೊಡನೆ ಬಾಹುಕನಿದ್ದಲ್ಲಿಗೆ ಕಳುಹಿಸಿದಳು. ಮಕ್ಕಳನ್ನು ನೋಡುತ್ತಲೇ ಬಾಹುಕನಿಗೆ ಪ್ರೇಮವುಕ್ಕಿ ಬಂತು. ಈ ವಿಷಯ ಕೇಶಿನಿ ತಿಳಿಸಿದಾಗ ದಮಯಂತಿ ತಂದೆತಾಯಿಗಳ ಅಪ್ಪಣೆ ಪಡೆದು, ಬಾಹುಕನನ್ನು ತನ್ನ ಅಂತಃಪುರಕ್ಕೆ ಬರಮಾಡಿದಳು. ದಮಯಂತಿಯನ್ನು ನೋಡುತ್ತಲೇ ಬಾಹುಕನಿಗೆ ದುಃಖವುಮ್ಮಳಿಸಿ ಬಂದು, ಅದನ್ನು ತಡೆಯಲು ಅಸಮರ್ಥನಾದನು. ತನ್ನನ್ನು ಬಿಟ್ಟು ಹೋದ ನಳನ ವಿಚಾರವಾಗಿ ಮಾತುಗಳನ್ನಾಡಿದಾಗ ಬಾಹುಕನು ನಡೆದು ಹೋದದ್ದನ್ನೆಲ್ಲಾ ಅವಳಿಗೆ ತಿಳಿಸಿ, ತನ್ನ ನಿಜರೂಪ ಪ್ರಕಟಿಸಿದನು. ಆಗ ಎಲ್ಲರಿಗೂ ಸಂತೋಷವಾಯಿತು. ಋತುಪರ್ಣನು ಸಂಖ್ಯಾಶಾಸ್ತ್ರ ಮತ್ತು ಅಕ್ಷವಿದ್ಯೆಗೆ ವಿನಿಮಯವಾಗಿ ಅಶ್ವವಿದ್ಯೆಯನ್ನು ನಳನಿಂದ ಪಡೆದು, ತನ್ನ ದೇಶಕ್ಕೆ ಹಿಂತಿರುಗಿದನು. ನಳದಮಯಂತಿಯರು ಹಲವುದಿನಗಳನ್ನು ವಿದರ್ಭದಲ್ಲೇ ಕಳೆದು, ಚಿಕ್ಕ ಸೈನ್ಯದೊಡನೆ ನಿಷಧಕ್ಕೆ ಹೋದರು. ನಳನು ತನ್ನ ತಮ್ಮ ಪುಷ್ಕರವನ್ನು ಜೂಜಿಗೆ ಆಹ್ವಾನಿಸಿದನು. ಪುಷ್ಕರನು ಅದಕ್ಕಾಗಿಯೇ ಹಾತೊರೆಯುತ್ತಿದ್ದನು. ಪುಷ್ಕರನೊಡನೆ ಈ ಬಾರಿ ಜೂಜಾಟದಲ್ಲಿ ತನ್ನ ರಾಜ್ಯವನ್ನೂ, ಪುಷ್ಕರನನ್ನೂ ಗೆದ್ದನು. ಬಳಿಕ ಪುಷ್ಕರನಿಗೆ ಅವನ ರಾಜ್ಯವನ್ನು ಕೊಟ್ಟು, ಅವನನ್ನು ಕಳುಹಿಸಿ, ತನ್ನ ದೇಶವನ್ನು ನಿಷ್ಠೆಯಿಂದ ಆಳುತ್ತಿದ್ದನು. ★

# ಸೂರ್ಯ ಚಿಕಿತ್ಸೆ

ಉದಯೇ ಬ್ರಹ್ಮರೂಪಶ್ಚ
ಮಧ್ಯಾಹ್ನೇ ತು ಮಹೇಶ್ವರಃ ।
ಅಸ್ತಮಾನೇ ಸ್ವಯಂ ವಿಷ್ಣುಃ
ತ್ರಯೀ ಮೂರ್ತಿರ್ದಿವಾಕರಃ ॥

ಉದಯಕಾಲದಲ್ಲಿ ಬ್ರಹ್ಮಸ್ವರೂಪನಾಗಿಯೂ, ಮಧ್ಯಾಹ್ನದಲ್ಲಿ ಮಹೇಶ್ವರನಾಗಿಯೂ ಅಸ್ತಮಾನಕಾಲದಲ್ಲಿ ಸಾಕ್ಷಾತ್ ವಿಷ್ಣು ಸ್ವರೂಪನಾಗಿಯೂ ಇರುವ ಸೂರ್ಯದೇವನಿಗೆ ನಮಸ್ಕರಿಸುತ್ತೇನೆ.

ಮಾನವ ಶರೀರವು ಪಂಚತತ್ತ್ವಗಳಾದ ಭೂಮಿ, ನೀರು, ಗಾಳಿ, ಬೆಳಕು ಮತ್ತು ಆಕಾಶಗಳಿಂದ ನಿರ್ಮಿತವಾಗಿದೆ. ಹೇಗೆಂದರೆ ಮೂಳೆಯಲ್ಲಿ ಭೂತತ್ತ್ವ, ರಕ್ತದಲ್ಲಿ ಜಲತತ್ತ್ವ, ಕಣ್ಣಿನಲ್ಲಿ ತೇಜಸ್ತತ್ತ್ವ, ಶ್ವಾಸನಾಳದಲ್ಲಿ ವಾಯುತತ್ತ್ವ ಮತ್ತು ಜಠರದಲ್ಲಿ ಆಕಾಶ (ಅವಕಾಶ) ತತ್ತ್ವಗಳಿವೆ. ಈ ಐದು ತತ್ತ್ವಗಳಲ್ಲಿ ಯಾವುದೊಂದರ ಕೊರತೆಯೇ ರೋಗಕ್ಕೆ ಕಾರಣ.

ಸಪ್ತಧಾತುಗಳು :– ಅಲ್ಲದೆ ದೇಹವು ಸಪ್ತಧಾತುಗಳಾದ ರಕ್ತ, ಮಾಂಸ, ಮೇಧಸ್ಸು, ಸ್ನಾಯು, ಅಸ್ತಿ, ಮಜ್ಜೆ ಮತ್ತು ಶುಕ್ರಗಳಿಂದ ಕೂಡಿದೆ. ರಕ್ತದಿಂದ ಜೀವನವೂ, ಮಾಂಸದಿಂದ ಪೋಷಣೆಯೂ, ಮೇಧಸ್ಸಿನಿಂದ ಸ್ನಿಗ್ಧತೆಯೂ, ಸ್ನಾಯುವಿನಿಂದ ಚಲನೆಯೂ, ಅಸ್ತಿಯಿಂದ ಆಧಾರವೂ, ಮಜ್ಜೆಯಿಂದ ಧಾರಣಶಕ್ತಿಯೂ ಮತ್ತು ಶುಕ್ರದಿಂದ ವಂಶಾಭಿವೃದ್ಧಿಯೂ ಆಗುತ್ತದೆ. ಈ ಸಪ್ತಧಾತುಗಳ ವೃದ್ಧಿಯಿಂದ ಪೌರುಷತ್ವವೂ, ಅದರಿಂದ ರೋಗನಿರೋಧಕಶಕ್ತಿಯೂ ಉಂಟಾಗುತ್ತದೆ. ಇವು ಪ್ರಕೋಪಗೊಂಡರೆ ಅದನ್ನೇ 'ದೋಷ'ವೆನ್ನುತ್ತಾರೆ. ಇವುಗಳ ಸಮತೆಯೇ ಆರೋಗ್ಯದ ಲಕ್ಷಣ.

ತ್ರಿಮಲಗಳು:– ಇಷ್ಟೇ ಅಲ್ಲದೆ ಮಲ, ಮೂತ್ರ ಮತ್ತು ಬೆವರುಗಳನ್ನು 'ತ್ರಿಮಲ' ಗಳೆನ್ನುತ್ತಾರೆ. ಇವುಗಳ ವಿಷಮತೆಯೂ ಸಹ ರೋಗಕ್ಕೆ ಕಾರಣ. ಮಲದೋಷದಿಂದ ಮಲಬದ್ಧತೆಯುಂಟಾಗುತ್ತದೆ. ಮೂತ್ರದೋಷದಿಂದ ಮೂತ್ರದ ಖಾಯಿಲೆಗಳುಂಟಾಗುತ್ತವೆ. ಸ್ವೇದದೋಷದಿಂದ ಚರ್ಮ ರೋಗಗಳುಂಟಾಗುತ್ತವೆ. ಮಾನವನಲ್ಲಿ ಈ ತ್ರಿಮಲಗಳ ಶೋಧನೆಯು ಸರಿಯಾಗಿ ಆಗುತ್ತಿದ್ದರೆ ರೋಗೋತ್ಪತ್ತಿಯಾಗಲು ಸಾಧ್ಯವೇ ಇಲ್ಲ.

ನಿಸರ್ಗಚಿಕಿತ್ಸೆ :– ಪಂಚಭೂತ (ತತ್ತ್ವ) ಗಳ ಕೊರತೆಯಿಂದ ಉಂಟಾದ ರೋಗಗಳು ಅವುಗಳನ್ನು ನಿಸರ್ಗ ಅಥವಾ ಪ್ರಕೃತಿಯಿಂದ ಪಡೆಯುವುದರಿಂದಲೇ ಗುಣವಾಗಬೇಕು. ಹೇಗೆಂದರೆ ಮಣ್ಣು ಮತ್ತು ಆಹಾರದಿಂದ 'ಭೂತತತ್ತ್ವ ಚಿಕಿತ್ಸೆ' ಶುದ್ಧವಾದ ನೀರು ಮತ್ತು ನೀರಾವಿಯಿಂದ 'ಜಲ ಚಿಕಿತ್ಸೆ' ಹಾಗೂ ಸೂರ್ಯರಶ್ಮಿ (ಬೆಳಕು) ಯಿಂದ 'ಸೂರ್ಯಚಿಕಿತ್ಸೆ'. ಹೀಗೆ ನಿಸರ್ಗದತ್ತ ವಸ್ತುಗಳನ್ನೇ ಉಪಯೋಗಿಸಿಕೊಂಡು ನೀಡಬಹುದಾದ ಈ ಚಿಕಿತ್ಸೆಯನ್ನು 'ನಿಸರ್ಗಚಿಕಿತ್ಸೆ' ಅಥವಾ 'ಪ್ರಕೃತಿಚಿಕಿತ್ಸೆ' ಎಂದು ಕರೆಯುತ್ತಾರೆ. ಇವುಗಳಲ್ಲೊಂದಾದ ತೇಜಸ್ತತ್ತ್ವಕ್ಕೆ ಸಂಬಂಧಿಸಿದ 'ಸೂರ್ಯಚಿಕಿತ್ಸೆ'ಯ ಕ್ರಮದ ಬಗ್ಗೆ ತಿಳಿಯೋಣ.

ಅಲೋಪತಿಯ ದುಷ್ಪರಿಣಾಮಗಳು :– ಸೂರ್ಯರಶ್ಮಿಯಿಂದ ಚಿಕಿತ್ಸೆ ನೀಡಲು ಸಾಧ್ಯವೇ ಎಂಬ ಅನುಮಾನ ಇಂದಿನ ವಿಜ್ಞಾನಯುಗದಲ್ಲಿ ಬಾರದೇ ಇರದು. ಇದಕ್ಕೆ ಕಾರಣ ನಾವು ವಿದೇಶೀ ವೈದ್ಯಪದ್ಧತಿಯಾದ ಅಲೋಪತಿಗೆ ಅತಿ ನಿಕಟವಾಗಿ ಹೊಂದಿಕೊಂಡಿರುವುದೇ ಆಗಿದೆ. ಅಲೋಪತಿ ಔಷಧಿಗಳು ರೋಗಕ್ಕೆ ಶೀಘ್ರ ಉಪಶಮನ ನೀಡುವುದರಲ್ಲಿ ಯಶಸ್ವಿಯಾಗಿರುವಂತೆಯೇ ದೇಹದ ಮೇಲೆ ದುಷ್ಪರಿಣಾಮ ಬೀರುವುದರಲ್ಲಿಯೂ ನಿಷ್ಣಾತವಾಗಿವೆ. ಉದಾಹರಣಾರ್ಥವಾಗಿ 'ಆಸ್ಪ್ರಿನ್ ಮಾತ್ರೆ' ಗಳನ್ನು ಸೇವಿಸಿ ರಕ್ತವಾಂತಿ ಮಾಡಿಕೊಂಡವರುಂಟು. 'ಸಲ್ಫಾಮಾತ್ರೆ' ಗಳನ್ನು ನುಂಗಿ ಪ್ರಜ್ಞಾಶೂನ್ಯರಾದವರುಂಟು. 'ಪೆನ್‌ಸಿಲಿನ್' ಚುಚ್ಚುಮದ್ದಿನಿಂದ ಪ್ರಾಣಕಳೆದುಕೊಂಡವರುಂಟು. 'ಪೆನಿಸಿಲಿನ್ ಆಯಿಂಟ್‌ಮೆಂಟ್'ನ್ನು ಕಣ್ಣಿಗೆ ಹಚ್ಚಿಕೊಂಡು ದೃಷ್ಟಿ ಕಳೆದುಕೊಂಡವರುಂಟು. ಆಸ್ಪ್ರೋ, ಸ್ಯಾರಿಡಾನ್, ಮುಂತಾದ ಮಾತ್ರೆಗಳು ಹೃದಯದುರ್ಬಲತೆಗೆ ಕಾರಣವಾಗುವುದುಂಟು. ನವಾಲ್ಜಿನ್, ಅನಾಲ್ಜಿನ್ ಮುಂತಾದ ನೋವು ನಿವಾರಕಗಳು ಮೈಮೇಲೆ ಬೊಕ್ಕೆ, ತುರಿಕೆಗಳನ್ನು ಉಂಟುಮಾಡುವುದು ನಮ್ಮ ಅನುಭವಕ್ಕೆ ಬಂದ ವಿಷಯವೇ ಆಗಿದೆ. ಹೆಚ್ಚು ಅಲೋಪತಿ ಔಷಧಿಗಳನ್ನು ಉಪಯೋಗಿಸುವುದರಿಂದ ನರಗಳ ದೌರ್ಬಲ್ಯ ಮತ್ತು ಕೆಲವೊಮ್ಮೆ ಹೊಸರೋಗಗಳ ಉದಯಕ್ಕೂ ನಾಂದಿಯಾಗಬಹುದು.

ಸೂರ್ಯಚಿಕಿತ್ಸೆಯ ಮಹತ್ವ :– ಆದರೂ ಜನರು ಹೆಚ್ಚಾಗಿ ಅಲೋಪತಿ ಔಷಧಿಗಳಿಗೇ ಮಾರು ಹೋಗುತ್ತಿರುವುದು ಅದು ಶೀಘ್ರಗತಿಯಲ್ಲಿ ರೋಗಗಳನ್ನು ಗುಣಪಡಿಸುತ್ತದೆಂಬುದು ಒಂದು ಕಾರಣದಾದರೆ ಅದಕ್ಕೆ ಸಂವಾದಿಯಾದ, ಅದಕ್ಕಿಂತಲೂ ಉತ್ತಮವಾದ ಬೇರೊಂದು ಚಿಕಿತ್ಸೆ ತಿಳಿಯದಿರುವುದು ಮತ್ತೊಂದು ಕಾರಣವಾಗಿದೆ. ಇತರ ಔಷಧಿಗಳು ರೋಗ ಬಂದಮೇಲೆ ರೋಗವನ್ನು ಗುಣಪಡಿಸಿದರೆ ಸೂರ್ಯಚಿಕಿತ್ಸೆಯು ರೋಗ ಬಾರದಂತೆಯೇ ತಡೆಗಟ್ಟುತ್ತದೆ. Prevention is better than cure' ಎಂಬ ಆಂಗ್ಲೋಕ್ತಿಗೆ ಅನುಸಾರವಾಗಿದೆ ಈ ಚಿಕಿತ್ಸಾಪದ್ಧತಿ. ಅಲ್ಲದೆ ಇದಕ್ಕೆ ಹಣವನ್ನು ಖರ್ಚುಮಾಡುವ ಅಗತ್ಯವೂ ಇಲ್ಲ.

ಸೂರ್ಯಚಿಕಿತ್ಸೆಯ ವ್ಯಾಪ್ತಿ :– ಸೂರ್ಯಚಿಕಿತ್ಸೆಯು ಇಂದು ನಿನ್ನೆಯದಲ್ಲ. ಇದಕ್ಕೆ ವೇದ

(23 ನೇ ಪುಟ ನೋಡಿ)



ಸೂರ್ಯ ನಾರಾಯಣಸ್ವಾಮಿ

ಶ್ರೀ ಕೆ. ಕೇಶವಮೂರ್ತಿ

## ಎರಡು ನರಸಿಂಹ ಕ್ಷೇತ್ರಗಳು

ಮೈಸೂರಿಗೆ ಕೇವಲ ಇಪ್ಪತ್ತೆಂಟು ಕಿಲೋ ಮೀಟರ್ ದೂರದಲ್ಲಿರುವ ತಿ. ನರಸೀಪುರ ಎಂಬ ಊರು ಅತ್ಯಂತ ಪುರಾತನ ಪವಿತ್ರಕ್ಷೇತ್ರ. ಇಲ್ಲಿಯ ಸ್ಥಳ ಮಹಾತ್ಮೆಯನ್ನು ಪ್ರಾಚೀನ ಗ್ರಂಥಗಳಿಂದ, ಸ್ಥಳ ಪುರಾಣದಿಂದ ಅಲ್ಲಿಯ ಹಿರಿಯರ ಹೇಳಿಕೆಗಳಿಂದ ಸಂಗ್ರಹಿಸಿರುವ ವಿಚಾರ ಇಂತಿದೆ.

ತಿ. ನರಸೀಪುರದಲ್ಲಿ ಕಾವೇರಿ, ಕಪಿಲಾ, ಸ್ಫಟಿಕ ಸರೋವರಗಳ ತ್ರಿವೇಣಿ ಸಂಗಮವಿದೆ. ಈ ನದೀ ತೀರದ ಎದುರು, ಪ್ರಶಾಂತ ತಾಣದಲ್ಲಿ, ಅತ್ಯಂತ ಪುರಾತನವಾದ ಗುಂಜಾ ನರಸಿಂಹ ದೇವಾಲಯವಿದೆ. ಇವನನ್ನು ಮೊದಲಿಗೆ ಬ್ರಹ್ಮನೇ ಆರಾಧನೆ ಮಾಡುತ್ತಿದ್ದನೆಂದೂ, ಧರ್ಮಪಾಲ, ಮಾರ್ಕಂಡೇಯ, ದೇವತೆಗಳೂ ಪೂಜಿಸಿದರೆಂದೂ ಆ ನಂತರ ಮನುಷ್ಯಾರಾಧನೆಯೆಂದೂ ಪುರಾಣ ಮಹಾತ್ಮೆ ಗ್ರಂಥಗಳಿಂದ ತಿಳಿದು ಬರುತ್ತೆ. ಈ ಹೇಳಿಕೆಯಂತೆ ತ್ರೇತಾ, ದ್ವಾಪರಗಳಲ್ಲೂ ಇದು ಇತ್ತು ಎಂದಾಗುತ್ತದೆ. ಈ ನರಸಿಂಹ ದೇವರು ತೊಡೆಯಲ್ಲಿ ಲಕ್ಷ್ಮಿಯನ್ನೂ ಕೂರಿಸಿಕೊಂಡಿರುವುದರಿಂದ ಲಕ್ಷ್ಮೀ ನರಸಿಂಹ ದೇವರು ಎಂದೂ, ತನ್ನ ಬಲದಹಸ್ತದಲ್ಲಿ ಬಳ್ಳಿಯೊಂದಿಗೆ ಸೇರಿರುವ ಗುಂಜಿಯನ್ನು ಹಿಡಿದಿರುವುದರಿಂದ ಗುಂಜಾ ನರಸಿಂಹನೆಂದೂ ಹೆಸರುವಾಸಿ ಆಗಿದ್ದಾನೆ.

ಸ್ವಾಮಿ ಹೀಗೆ ಗುಂಜಾ ನರಸಿಂಹ ಎಂದು ಹೆಸರು ಪಡೆಯಲು ಒಂದು ಕಥೆಯೂ ಇದೆ.

ನದೀತೀರಕ್ಕೆ ಅತಿಸಮೀಪದಲ್ಲಿ ದಟ್ಟವಾದ ಕಾಡು ಇದ್ದು ಅದು ಅತಿಭಯಂಕರವಾಗಿತ್ತು. ಈ ನದಿಯ ಸೋಪಾನದಲ್ಲಿ ಪ್ರತಿನಿತ್ಯವೂ ಒಬ್ಬ ಅಗಸರವನು, ಸಮೀಪದ ಊರಿನ ಜನರ ಬಟ್ಟೆಗಳನ್ನು ಒಗೆದು ಸ್ವಚ್ಛ ಮಾಡುತ್ತಿದ್ದನು. ಅವನ ಕೈ, ಕಾಯಕದಲ್ಲಿದ್ದರೂ, ಮನಸ್ಸು 'ಎಂದಿಗೆ ನನಗೆ ಈ ಭವಬಂಧನದಿಂದ ಬಿಡುಗಡೆ, ಪಾಪಗಳ ರಾಶಿ ಯಿಂದ ಮುಕ್ತಿ' ಎಂದು ಚಿಂತಿಸುತ್ತಿತ್ತು. ಕಾಯೇನ, ವಾಚಾ, ಮನಸಾ ಸದಾ ಇದೇ ಚಿಂತೆಯಲ್ಲಿ ಅವನು ಭಗವಂತನನ್ನು ನೆನೆಯುತ್ತಿದ್ದ ಹೀಗಿರುವಾಗ ಒಂದು ರಾತ್ರಿ ಅವನಿಗೆ ಕನಸಿನಲ್ಲಿ ನರಸಿಂಹ ದೇವರು ಬಂದು, 'ಇಂತಹ ಜಾಗಗಲ್ಲಿ ನಾನಿದ್ದೇನೆ, ನೀನು ನನಗೆ ಅಲ್ಲಿ ದೇವಾಲಯವನ್ನು ಕಟ್ಟಿಸು. ಇದರಿಂದ ನಿನಗೆ ಒಳಿತಾಗುತ್ತೆ' ಎಂದು ಮೇಲಿಂದ ಮೇಲೆ ಹೇಳಿದಂತಾಗಿ ಎಚ್ಚರವಾಯಿತು. 'ಛಿ, ಇದು ನನ್ನ ಭ್ರಮೆ ಅಷ್ಟೇ. ಬರಿಯ ಕನಸು. ಸದಾ ಅದೇ ಯೋಚಿಸುತ್ತಿದ್ದುದರಿಂದ ನನಗೆ ಅಂತಹ ಕನಸುಬಿದ್ದಿದೆ' ಎಂದು ಮತ್ತೆ ಮಲಗಿದಾಗ ಪುನಃ ಅದೇ ದೃಶ್ಯ. ಜೊತೆಗೆ 'ಇದು ನಿನ್ನ ಭ್ರಾಂತಿಯಲ್ಲ. ನಿಜವಾಗಿಯೂ ಬಹಳ ಹಿಂದಿನಿಂದಲೂ ನಿಂತಿರುವ ನನಗೆ ನೀನು ದೇವಾಲಯ ಕಟ್ಟು' ಎಂದು ಪುನರೋಕ್ತಿ ಆಯಿತು.

ಆಗ ಆ ಅಗಸರವನು, "ಏನು ಸ್ವಾಮಿ ನೀವು ತಮಾಷೆ ಮಾಡ್ತೀರಾ, ದಿನಾ ಊಟತಿಂಡಿಗೇ ಸಾಲದೆ ತಾಪತ್ರಯ ಪಡುತ್ತಿರುವ ನಾನು ದೇವಾ

# ದಕ್ಷಿಣ ಕಾಶಿ ತಿ. ನರಸೀಪುರ

ಲಯ ಕಟ್ಟುವುದು ಹೇಗೆ? ನಿಮ್ಮ ಆಸೆ ವಿಚಿತ್ರವಾದದ್ದು" ಎಂದನು. ಅದಕ್ಕೆ ಆ ದೇವರು, 'ನೀನು ನಿತ್ಯವೂ ಬಟ್ಟೆ ಒಗೆಯುವ ಬಂಡೆಯನ್ನು ಎತ್ತಿ ನೋಡು. ಅಲ್ಲಿ ನಿಧಿ ಇದೆ, ಅದರಿಂದ ನಿನ್ನ ಕೆಲಸ ಯಾವ ತಾಪತ್ರಯವೂ ಇಲ್ಲದೆ ನಡೆಯುತ್ತದೆ' ಎಂದು ಹೇಳಿದಂತಾಯ್ತು. ಅದರಂತೆ ಆ ಅಗಸರವನು ಸಿಕ್ಕ ನಿಧಿಯಿಂದ ಗರ್ಭಗುಡಿ ಮತ್ತು ಪ್ರಾಕಾರಗಳನ್ನು ಕಟ್ಟಿಸಿದನಂತೆ. ಅನಂತರ ಅಲ್ಲಿಗೆ ಸಮೀಪವಾಗಿದ್ದ ಮೂಗೂರು ರಾಜ ರಾಣಿಯರು ಈ ದೇವಾಲಯವನ್ನು ವಿಸ್ತರಿಸಿದರು. ಆ ಅಗಸರವನು ದೇವಾಲಯ ಕಟ್ಟಿಸಿದ ಮೇಲೆ, ಲಕ್ಷ್ಮೀ ನರಸಿಂಹದೇವರು, "ನಿನ್ನ ಭಕ್ತಿಗೆ ಮೆಚ್ಚಿರುವೆ. ನಿನಗೆ ಬೇಕಾದ ವರವನ್ನು ಕೇಳು ಕೊಡುತ್ತೇನೆ" ಎಂದರು. ಅದಕ್ಕೆ "ನನಗೆ ಈ ಭವ ಬಂಧನದ ಬಿಡುಗಡೆಗಾಗಿ, ಪಾಪಗಳ ಮುಕ್ತಿಗಾಗಿ ಕಾಶಿಯಲ್ಲಿ ಗಂಗಾಸ್ನಾನ ಹಾಗೂ ವಿಶ್ವೇಶ್ವರದರ್ಶನ ಮಾಡುವ ಆಸೆ ಇದೆ. ಕೃಪೆಮಾಡಿ ಅದನ್ನು ನಡೆಸಿಕೊಡು" ಎಂದು ಅಗಸರವನು ಕೇಳಿದ.

'ಕಾಶಿಗಿಂತಲೂ ಪವಿತ್ರವಾದ ಜಾಗ ಇದು. ನಿನ್ನ ಮುಂದೆ ಇರುವ ಈ ಕಾವೇರಿ, ನದಿಗಿಂತ ಬೇರೆ ತೀರ್ಥ ಬೇಕೆ? ನಾನು ಅಲ್ಲಿಯ ದೇವರಿಗಿಂತ ಒಂದು ಗುಂಜಿ ತೂಕ ಹೆಚ್ಚಿನವನು ನನ್ನನ್ನು ಸೇವಿಸಿದರೆ ಎಲ್ಲ ಪುಣ್ಯವು ನಿನಗೆ ದೊರಕುತ್ತದೆ' ಎಂದು ಹೇಳಿ ತನ್ನ ಕೈಯಲ್ಲಿ ಗುಲಗುಂಜಿಯನ್ನು ಹಿಡಿದು ತೋರಿಸಿದನಂತೆ. ಇಂದೂ ಆ ನರಸಿಂಹ ದೇವರ ಕೈಯಲ್ಲಿ ಕಾಣುವ ಬಳ್ಳಿಯೊಂದಿಗೆ ಇರುವ ಗುಂಜಿ ಅದೇ ಎಂದು ಹೇಳುವ ಪ್ರತೀತಿ. ಉತ್ತರದಲ್ಲಿ ಗಂಗೆ, ಯಮುನೆ, ಸರಸ್ವತಿಗಳ ಸಂಗಮವಾಗಿದೆ. ಆದರೆ ಸರಸ್ವತಿ ನದಿಯು ಗುಪ್ತಗಾಮಿನಿ ಆಗಿ ಬೆರೆತಳು. ಅಂತೆಯೇ ದಕ್ಷಿಣದ ಪ್ರಯಾಗವಾದ ತಿರುಮಕೂಡಲು ನರಸೀಪುರದಲ್ಲೂ ಕಾವೇರಿ, ಕಪಿಲ, ಮತ್ತು ಸ್ಫಟಿಕ ಸರೋವರಗಳ ಸಂಗಮವಾಗಿದೆ. ಇಲ್ಲಿ ಸ್ಫಟಿಕ ಸರೋವರ ಗುಪ್ತಗಾಮಿನಿ. ಉತ್ತರದೇಶದ ಈ ಯಾತ್ರಾ ಸ್ಥಳ ಭಾರದ್ವಾಜ ಕ್ಷೇತ್ರವೆನಿಸಿ ಕೊಂಡಿದೆ. ಅದು ಬಿಂದುಮಾಧವನ ಸನ್ನಿಧಿ: ದಕ್ಷಿಣದ ತಿ. ನರಸೀಪುರ ಇರುವುದು ಭಾಸ್ಕರ ಕ್ಷೇತ್ರದಲ್ಲಿ. ಇದು ಲಕ್ಷ್ಮೀ ನರಸಿಂಹ ಸ್ವಾಮಿಯ ಸನ್ನಿಧಿ. ಕಾಶಿಯಲ್ಲಿ ವಿಶ್ವೇಶ್ವರನಿದ್ದಂತೆ ಇಲ್ಲಿ ಅಗಸ್ತ್ಯೇಶ್ವರನಿದ್ದಾನೆ.

ಇದು ಪಂಚಲಿಂಗೇಶ್ವರ ಸನ್ನಿಧಿಯೂ ಆಗಿದೆ. ಅಗಸ್ತ್ಯೇಶ್ವರ, ಹನುಮಂತೇಶ್ವರ, ಭಿಕ್ಷೇಶ್ವರ ಅನಂತೇಶ್ವರ ಮತ್ತು ಮೂಲಸ್ಥಾನೇಶ್ವರ ಎಂಬುದೇ ಈ ಪಂಚ ಲಿಂಗಗಳು.

ಪ್ರಯಾಗದಲ್ಲಿ ವಟವೃಕ್ಷ ವಿದ್ದಂತೆ, ತಿ. ನರಸೀಪುರದಲ್ಲಿ ಬ್ರಹ್ಮಾಶ್ವತ್ಥವಿದೆ. ಈ ಅಶ್ವತ್ಥಮರವನ್ನು ಸ್ವಯಂ ಬ್ರಹ್ಮನೇ ನೆಟ್ಟಿದ್ದು ಎಂದು ಹೇಳಿಕೆ. ನಮ್ಮ ಹಿರಿಯರಿಗೆ, ಅವರ ಹಿಂದಿನವರು, ಅವರಿಗೆ ಅವರ ಹಿಂದಿನವರು ಹೇಳಿದ್ದೆಂದು ಹಿಂದಿನ ತಲೆ ಮಾರುಗಳಿಂದ ಈ ಹೇಳಿಕೆಯನ್ನೇ ಹೇಳುತ್ತಾ ಬಂದಿದ್ದಾರೆ. ಈಗ 80 ವರ್ಷಗಳ ಹಿಂದ ಈ ವೃಕ್ಷವು ಬಾಡಿದಾಗ ಪಕ್ಕದಲ್ಲಿ ನೆಟ್ಟ, ಮತ್ತೊಂದು ಅಶ್ವತ್ಥ ವೃಕ್ಷವು ಬೆಳೆದು ದೊಡ್ಡದಾಗಿದ್ದು ಬಾಡಿ ಹೋಯಿತೆಂದೂ, ಆದರೆ ಹಿಂದಿ

(23ನೇ ಪುಟ ನೋಡಿ)

ಕರ್ನಾಟಕ ಉತ್ತರದಕ್ಷಿಣವೆನ್ನಬಹುದಾದ ಎರಡು ಸ್ಥಳಗಳಲ್ಲಿನ ನರಸಿಂಹ ದೇವಾಲಯಗಳ ಪರಿಚಯವನ್ನು ಈ ಪುಟಗಳಲ್ಲಿ ಸಾದರ ಪಡಿಸಲಾಗಿದೆ. ಹೊರನೋಟಕ್ಕೆ ದೂರವಾಗಿ ವೈವಿಧ್ಯವನ್ನು ಹೊಂದಿದ್ದರೂ ತಾತ್ತ್ವಿಕವಾಗಿ, ಹೇಗೆ ಐಕ್ಯತೆ ಹೊಂದಿದೆ ಎಂಬುದನ್ನು ವಿವರಿಸುತ್ತದೆ ಈ ತಿ. ನರಸೀಪುರ, ತೊರವೆಗಳು.

ಶ್ರೀಮತಿ ಎ. ಪಂಕಜ

# ತೊರವೆಯ ನರಸಿಂಹ

ಭೂದೇವಿಯನ್ನು "ರತ್ನಗರ್ಭಾ" ಎಂದು ನಮ್ಮ ಹಿರಿಯರು ಸಂಬೋಧಿಸಿದ್ದಾರೆ. ಈ ಮಾತಿನ ಸತ್ಯತೆಯು ಅರಿವಾಗಬೇಕೆಂದಲ್ಲಿ ಬಿಜಾಪುರಕ್ಕೆ ಬಂದ ಪ್ರವಾಸಿಗಳು ಬಿಜಾಪುರದಿಂದ ಅಥಣಿಗೆ ಹೋಗುವ ಮಾರ್ಗದಲ್ಲಿ ನಾಲ್ಕು ಮೈಲಿಗಲ್ಲುಗಳನ್ನು ತುಳಿಯಬೇಕಾಗುವುದು. ಆಗ ಅವರಿಗೆ ನಮ್ಮ ಹಿರಿಯರು ವಸುಂಧರೆಯನ್ನು ರತ್ನಗರ್ಭಾ ಎಂದೇಕೆ ಕರೆದರೆಂಬುದರ ಅರಿವಾಗುವುದು.

ಕನ್ನಡ ಸಾಹಿತ್ಯದಲ್ಲಿಯೇ ಮೇರುಕೃತಿ ಎಂದು ಹೊಗಳಿಸಿಕೊಳ್ಳುತ್ತಿರುವ ರಾಮಾಯಣ ಗ್ರಂಥವು ರಚನೆಯಾದ ಸ್ಥಳವೇ "ತೊರವೆ" ಎಂಬ ಹೆಸರಿನಿಂದ ಕರೆಸಿಕೊಳ್ಳುತ್ತಿದೆ. ಈ ತೊರವೆಯಲ್ಲಿರುವ ಗುಹಾಂತರ್ಯಾಮಿಯಾದ ನರಸಿಂಹನಷ್ಟೇ ಈ ರಾಮಾಯಣವೂ ಸಹ ಅಮೂಲ್ಯವಾದ ರತ್ನವೆಂದು ಕರೆಸಿಕೊಂಡಿದೆ.

ತೊರವೆಯು ಬಿಜಾಪುರ ನಗರಕ್ಕೆ ಬಹು ಸಮೀಪವರ್ತಿಯಾದ ಒಂದು ಸಣ್ಣಹಳ್ಳಿ. ಈ ಹಳ್ಳಿಯು ಚಿಕ್ಕದಾಗಿದ್ದರೂ ಸಹ ಇದರ ಇತಿಹಾಸವು ಮಾತ್ರ ಬಹು ಅಗಾಧವಾದುದಾಗಿದೆ. ಹಿಂದೆ ಈ ಗ್ರಾಮವನ್ನು ತ್ವರಿತಾಲಯ, ನೌಲಾಖಪುರ, ನವರಸಪುರ ಎಂಬೆಲ್ಲ ಹೆಸರುಗಳಿಂದ ಕರೆದುದುಂಟು. ಇಲ್ಲಿರುವ ನರಸಿಂಹನು ಕರ್ನಾಟಕದ ನೂರಾರು ಕುಟುಂಬಗಳಿಗೆಲ್ಲ ಆರಾಧ್ಯ ದೇವನೆಂದು ಇಂದಿಗೂ ಪೂಜಿಸಿಕೊಳ್ಳುತ್ತಿರುವುದುಂಟು.

ಈ ಗ್ರಾಮದ ಅಸ್ತಿತ್ವದ ಇತಿಹಾಸವನ್ನು ಕುರಿತು ಅಭ್ಯಾಸ ಮಾಡಹೊರಟರೆ ನಾವು ಏಳನೆಯ ಶತಮಾನದಷ್ಟು ಕಾಲ ಹಿಂದಕ್ಕೆ ಹೋಗಬೇಕಾಗುತ್ತದೆ. ಹನ್ನೆರಡನೆಯ ಶತಮಾನದಲ್ಲಂತೂ ಈ ನಗರದ ಖ್ಯಾತಿಯು ನಾಡ ತುಂಬೆಲ್ಲ ಪಸರಿಸಿದಂತೆ ಭಾಸವಾಗುತ್ತದೆ. ಸೇವುಣ ಮನೆತನದ ಅರಸನಾದ ಜೈತುಗಿಯ ಕಾಲದ ಶಾಸನಗಳು ಈ ಗ್ರಾಮದ ಮಹತಿಯನ್ನು ಎತ್ತಿ ತೋರಿಸುತ್ತವೆ. ಯಾದವಕುಲೋತ್ಪನ್ನನಾದ ಸಿಂಘಣನು ನಾರಸಿಂಗ ಪಾದೋದಕ ಸಂಪೂತ, ನರಹರಿ ಚರಣಭಕ್ತ—ಎಂಬಿತ್ಯಾದಿ ಬಿರುದುಗಳನ್ನು ಧಾರಣ ಮಾಡಿಕೊಂಡಿದ್ದನೆಂಬ ವಿಷಯವು ಇತಿಹಾಸದಿಂದ ತಿಳಿದು ಬರುತ್ತದೆ. ಯಾದವ ಕುಲದ ಅರಸರು ನರಸಿಂಹನನ್ನೇ ತಮ್ಮ ಆರಾಧ್ಯದೇವನೆಂದು ಪೂಜಿಸುತ್ತಿದ್ದರೆಂದೂ ಇತಿಹಾಸದ ಅಭ್ಯಾಸದಿಂದ ತಿಳಿದುಬರುತ್ತದೆ.

ಒಂದು ಕಾಲದಲ್ಲಿ ತೊರವೆ ಹಾಗೂ ಇಂದಿನ ಬಿಜಾಪುರ ನಗರಗಳು ಒಕ್ಕೂಡಿದ್ದವೆಂದು ಹೇಳುತ್ತಾರೆ. ಆದಿಲಶಾಹಿ ಮನೆತನದವರು ಮೊಟ್ಟಮೊದಲು ತೊರವೆಯಲ್ಲಿಯೇ ತಮ್ಮ ರಾಜಧಾನಿಯನ್ನು ಮಾಡಿಕೊಂಡಿದ್ದರಂತೆ. ಈ ಮಾತಿಗೆ ಸಾಕ್ಷೀಭೂತವಾಗಿ ತೊರವೆಯು ಗ್ರಾಮಕ್ಕೆ ಅಂಟಿಕೊಂಡು ನಿಂತಿರುವ ಅನೇಕ ಪ್ರಾಚೀನ ಕಟ್ಟಡಗಳು ಸಾಕ್ಷಿ ಹೇಳುತ್ತವೆ. ಇಲ್ಲಿರುವ ಒಂದು ಕಟ್ಟಡದಲ್ಲಿ ಮಧುರಧ್ವನಿಯಿಂದ ಕೂಗಿದಾಗ ಸಪ್ತಸ್ವರಗಳು ಕೇಳಿಬರುತ್ತಿದ್ದವೆಂದು ಹಿರಿಯರು ಹೇಳುತ್ತಾರೆ. ಆದುದರಿಂದಲೇ ಈ ಗ್ರಾಮವನ್ನು ನವರಸಪುರವೆಂದು ಕರೆಯುತ್ತಿದ್ದರೆಂಬ ಕಾರಣವನ್ನು ಕೊಡುವುದುಂಟು.

ಆದಿಲಶಾಹಿ ಮನೆತನದವರು ತೊರವೆಯಲ್ಲಿಯ ತಮ್ಮ ಕಟ್ಟಡಗಳನ್ನು ನಿರ್ಮಿಸಲು ಒಂಭತ್ತು ಲಕ್ಷ ವರಹಗಳನ್ನು ಖರ್ಚು ಮಾಡಿದುದರಿಂದ ಅದನ್ನು 'ನೌಲಾಖಪುರ'ವೆಂದು ಕರೆಯಲಾರಂಭವಾಯಿತೆಂದು ಕೆಲವರ ಅಭಿಪ್ರಾಯವಿದೆ. ಅದೇನೆ ಇರಲಿ ಆದಿಲಶಾಹಿ ಮನೆತನದವನಾದ ಇಬ್ರಾಹಿಮ್ ಶಹನಿಂದ ರಚಿತವಾದ ಗ್ರಂಥಗಳ ಪ್ರಾರಂಭದಲ್ಲಿ ಶ್ರೀಲಕ್ಷ್ಮೀ ನರಸಿಂಹ ಪ್ರಸನ್ನ ಎಂದು ಉರ್ದು ಭಾಷೆಯಲ್ಲಿ ಬರೆದುದನ್ನು ಕಂಡಾಗ ಆಶ್ಚರ್ಯವಾಗುತ್ತದೆ.

ನಾವು ಸ್ವಾಭಾವಿಕವಾಗಿ ಎಲ್ಲ ಕಡೆಗೂ ಕಾಣುವಂತೆ ತೊರವೆಯ ದೇವಾಲಯವಿಲ್ಲ. ಹಿಂದೂ ದೇವಾಲಯಗಳಿಗೆ ಅತ್ಯಾವಶ್ಯಕವೆನಿಸುವ ಹೆಬ್ಬಾಗಿಲ ಗೋಪುರವಾಗಲಿ ಅಥವಾ ಗರ್ಭಗುಡಿಯ ಮೇಲಿರುವ ಗೋಪುರವಾಗಲಿ ಇಲ್ಲಿ ನಮಗೆ ಕಾಣಸಿಗುವುದಿಲ್ಲ. ಪ್ರತಿಯಾಗಿ ಹೊರಗಿನಿಂದ ಬಂದ ಪ್ರವಾಸಿಗರಿಗೆ ಮೇಲುನೋಟಕ್ಕೆ ಈ ದೇವಾಲಯವು ಮುಹಮ್ಮದೀಯ ಪಂಥದವರ ಪ್ರಾರ್ಥನಾ ಮಂದಿರದಂತೆ ಕಾಣಬರುತ್ತವೆ. ಹೊರಭಾಗದ ಪ್ರಾಕಾರವನ್ನು ದಾಟಿ ಮುಂದಕ್ಕೆ ಹೋಗುವಾಗ ಅನೇಕ ಕಮಾನುಗಳಿಂದ ಕೂಡಿದ ಮಂಟಪವು ಸಿಗುತ್ತದೆ. ಈ ಕಮಾನು ಮಂಟಪದ ಮಧ್ಯದಲ್ಲಿ ಅನಂತರದಲ್ಲಿ ನಿರ್ಮಾಣಗೊಂಡ ತುಳಸಿಯ ವೃಂದಾವನವಿದೆ. ವೃಂದಾವನದ ಹಿನ್ನೆಲೆಯಾಗಿರುವ ಭಾಗವನ್ನು ಪಾಕಶಾಲೆಯಾಗಿ ಪರಿವರ್ತನಗೊಳಿಸಲಾಗಿದೆ.

ಮೊದಲು ಈ ಗ್ರಾಮದಲ್ಲಿ ನರಸಿಂಹನ ಸಾಲಿಗ್ರಾಮ ರೂಪವನ್ನಿಟ್ಟು ಪೂಜಿಸುತ್ತಿದ್ದರಂತೆ. ಕಾಲಾಂತರದಲ್ಲಿ ಕೃಷ್ಣಾ ತೀರದ ಚಿಮ್ಮಲಗಿಯ ಗ್ರಾಮದ ಒಂದು ಹೊಲದಲ್ಲಿ ಇಂದು ಕಾಣುವ ಮೂರ್ತಿ ಸಿಕ್ಕಿತೆಂದೂ ಅದನ್ನು ತಂದು ಈ ಗುಹೆಯಲ್ಲಿ ಪ್ರತಿಷ್ಠಾಪಿಸಿದರೆಂದೂ ತೊರವೆಯ ಸ್ಥಳ ಪುರಾಣದಿಂದ ತಿಳಿದುಬರುತ್ತದೆ. ಆದರೆ ಈ ಮೂರ್ತಿಯು ಯಾವಾಗ ದೊರಕಿತು, ಯಾರು ಅದನ್ನು ತೊರವೆಗೆ ತಂದು ಪ್ರತಿಷ್ಠಾಪಿಸಿದರು ಎಂಬ ಬಗ್ಗೆ ಸರಿಯಾದ ವಿವರಗಳು ಈ ವರೆಗೆ ಉಪಲಬ್ಧವಾಗಿಲ್ಲ. ಹಿಂದೆ ಮೂರ್ತಿಭಂಜಕರ ಹಾವಳಿಯು ಆರಂಭವಾದಾಗ ಹಿಂದೂಗಳು ತಾವು ಪೂಜಿಸುತ್ತ ಬಂದ ದೇವತೆಗಳನ್ನು ಉಳಿಸಿಕೊಳ್ಳಲು ಅಂಥ ವಿಗ್ರಹಗಳನ್ನು ಜಲದಲ್ಲಿಯೋ ಅಥವಾ ಭೂಮಿಯಲ್ಲಿಯೋ ಅಡಗಿಸಿಡುತ್ತಿದ್ದರೆಂಬ ವಿಷಯವು ಅನೇಕ ಕ್ಷೇತ್ರಗಳ ಸ್ಥಳಪುರಾಣಗಳಿಂದ ಸ್ಪಷ್ಟವಾಗುತ್ತದೆ.

ಕನ್ನಡನಾಡಿನ ಹರಿದಾಸ ಪಂಥಕ್ಕೆಲ್ಲ ಆಚಾರ್ಯ ಪುರುಷರೆಂದು ಖ್ಯಾತರಾದ ಶ್ರೀ ಪುರಂದರದಾಸರು ಈ ದೇವನನ್ನು ಕುರಿತು



ತೊರವೆಯ ನರಸಿಂಹ

**ಶ್ರೀ ಆದ್ಯ ರಾಮಾಚಾರ್ಯ**

ದಾನವನ ಕೊಂದದ್ದಲ್ಲ ಕಾಣಿರೋ ಇದು
ಏಣಾಂಕ ಮೋಹನಾಂಗ ಮದನಜನಕ
ತೊರವೆಯ ನರಸಿಂಗ

—ಎಂದು ಈ ದೇವನನ್ನು ಬಾಯ್ತುಂಬ ಕೊಂಡಾಡಿದ್ದಾರೆ. ಈ ಪದ್ಯವನ್ನು ನೋಡಿದಾಗ ಅವರ ಕಾಲಕ್ಕೇ ತೊರವೆಯು ಸುಪ್ರಸಿದ್ಧವಾದ ಕ್ಷೇತ್ರವಾಗಿತೆಂದು ಭಾಸವಾಗುತ್ತದೆ.

## ಸಾಲಿಗ್ರಾಮ ಮೂರ್ತಿ

ಹೊರನೋಟಕ್ಕೆ ಈ ಮಂದಿರವು ಮಹಮ್ಮದೀಯ ಪಂಥದ ಶೈಲಿಯಲ್ಲಿ ನಿರ್ಮಾಣವಾಗಿದ್ದರೂ ಸಹ, ಈ ದೇವಾಲಯದ ನೈರುತ್ಯ ಭಾಗದಲ್ಲಿರುವ ದ್ವಾರದಿಂದ ಮುಂದೆ ಹೋದರೆ ಒಂದು ಚಿಕ್ಕ ಕೋಣೆಯು ಸಿಗುತ್ತದೆ. ಮೊದಲು ನರಸಿಂಹನ ಸಾಲಿಗ್ರಾಮವನ್ನು ಈ ಸ್ಥಳದಲ್ಲಿಯೇ ಇಟ್ಟು ಪೂಜಿಸುತ್ತಿರಬಹುದೆಂದೆನಿಸುತ್ತದೆ. ಈ ಕೋಣೆಯ ಒಂದು ಭಾಗದಲ್ಲಿ ಕಿರಿದಾದ ಕಿಂಡಿಯು ಕಾಣಸಿಗುವುದು. ಕಿಂಡಿಯಿಂದಿಳಿದು ಕೆಲವು ಹೆಜ್ಜೆ ಮುಂದೆ ಸಾಗಿದ ಕೇವಲ ಒಂದು ಇಂಚಿನಷ್ಟು ಗಾತ್ರದಲ್ಲಿರುವ ಬೆಳಕಿಂಡಿಯ ಪ್ರಕಾಶದಲ್ಲಿ ಭವ್ಯವಾದ ಈಶ್ವರನ ಪಿಂಡಿಕೆಯು ಕಾಣಸಿಗುವುದು. ರುದ್ರಾಂತರ್ಯಾಮಿಯಾದ [ಈ ಈಶ್ವರನ ಬಲಭಾಗದಲ್ಲಿಯೇ ಮೂರು ಅಡಿ ಎತ್ತರ ಎರಡು ಅಡಿ ಅಗಲವಾದ ಸಾಲಿಗ್ರಾಮ ಶಿಲೆಯಲ್ಲಿ ಕೆತ್ತಲ್ಪಟ್ಟ ನರಸಿಂಹನ ವಿಗ್ರಹವು ಕಾಣಸಿಗುತ್ತದೆ. ಈ ದೇವನ ಹಿಂದಿರುವ ಪ್ರಭಾವಳಿಯಲ್ಲಿ ದಶಾವತಾರಗಳನ್ನು ಬಿಡಿಸಿದ್ದಾರೆ. ಕೆಳಭಾಗದಲ್ಲಿ ಶ್ರೀದೇವಿಯು ನಿಂತಿದ್ದಾಳೆ. ಎಡಭಾಗದಲ್ಲಿ ಪ್ರಹ್ಲಾದರಾಯನ ಮೂರ್ತಿಯನ್ನು ಕೆತ್ತಲಾಗಿದೆ. ಈ ಸುಂದರವಾದ ವಿಗ್ರಹವನ್ನು ನೋಡಿದಾಗ ಶ್ರೀಮದ್ಭಾಗವತದ ಸಪ್ತಮ ಸ್ಕಂಧದ ವರ್ಣನೆಯು ಕಣ್ಣು ಮುಂದೆ ಕಟ್ಟಿದಂತಾಗುತ್ತದೆ.

ಗರುಡವಾಹನನಾಗಿ ಕುಳಿತಿರುವ ದೇವನು ತನ್ನೆರಡೂ ಕೈಗಳಿಂದ ಕಂಬವನ್ನು ಸೀಳಿದ್ದಾನೆ. ಮತ್ತೆರಡು ಕೈಗಳಿಂದ ಹಿರಣ್ಯಕಶಿಪುವಿನ ಕರುಳನ್ನು ಬಗೆದಿದ್ದಾನೆ. ಇನ್ನುಳಿದ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ ಪದ್ಮಗಳನ್ನು ಧರಿಸಿಕೊಂಡಿದ್ದಾನೆ. ಆ ರುದ್ರ ಭಯಂಕರ ಮೂರ್ತಿಯನ್ನು ಕಂಡಾಗ ದುಷ್ಟ ಶಿಕ್ಷಕ ಶಿಷ್ಟ ಪರಿಪಾಲಕನಾದ ಸ್ವಾಮಿಗೆ ತಲೆ ಬಾಗಲೇ ಬೇಕಾಗುತ್ತದೆ.

## ಗುಪ್ತಮಾರ್ಗ

ಶತಮಾನಗಳಷ್ಟು ಹಿಂದಿನ ಕಾಲದಲ್ಲಿ ಅರ್ಚಕರು ಇಲ್ಲಿರುವ ಗುಪ್ತಮಾರ್ಗದಿಂದ ನರಸಿಂಹ ತೀರ್ಥದವರೆಗೂ ಹೋಗಿ ಅಭಿಷೇಕಕ್ಕಾಗಿ ನೀರು ತರುತ್ತಿದ್ದರಂತೆ. ಈಗ ಆ ದ್ವಾರವನ್ನು ಮುಚ್ಚಲಾಗಿದೆ ಎಂದು ಹೇಳುತ್ತಾರೆ. ಹೊರಗಿನ ಬಾಗಿಲಿಗೆ ಕಲ್ಲುಬಂಡೆಯನ್ನಿಳಿದಾಗ ಗುಹಾಂತರದಲ್ಲಿ ದೇವನಿರುವನೆಂಬ ಕಲ್ಪನೆಯು ಯಾರಿಗೂ ಬರದಂತಾಗುತ್ತದೆ. ಸಮಗ್ರ ಗುಹೆ ಕ್ಷತ್ರಿಮವಾದುದೆಂಬುದು ಸ್ಥಳಕ್ಕೆ ಭೇಟಿ ಕೊಟ್ಟವರಿಗೆ ಮಾತ್ರ ಅರಿವಾಗದಿರದು. ಈ ನರಸಿಂಹನ ವಿಗ್ರಹವು ದೇವಗಿರಿಯ ಯಾದವರ ಕಾಲದ ಪ್ರತಿಮೆ. ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಈ ದೇವನ ಒಕ್ಕಲು ಮನೆತನದವರು ಕರ್ನಾಟಕ ತುಂಬೆಲ್ಲ ಪಸರಿಸಿದ್ದಾರೆ.

ಈ ಗ್ರಾಮದಲ್ಲಿ ನಡೆಯುವ ನರಸಿಂಹ ಜಯಂತಿ ಹಾಗೂ ಆಶ್ವೀಜ ಶುದ್ಧ ಪ್ರತಿಪದೆಯಂದು ನಡೆಯುವ ಸೀಮೋಲ್ಲಂಘನ ಮೊದಲಾದ ಉತ್ಸವಾದಿಗಳಿಗೆಲ್ಲ ಆ ಒಕ್ಕಲು ಮನೆತನದ ಭಕ್ತರೆಲ್ಲ ಬಂದು ಭಾಗವಹಿಸುತ್ತಾರೆ.

ಈ ದೇವನ ಪೂಜಾಕೈಂಕರ್ಯಗಳಿಗಾಗಿ ಯಾದವರ ಕಾಲದಿಂದ ಆದಿಲಶಾಹಿ ಹಾಗೂ ಪೇಶ್ವೆಯರ ಕಾಲದವರೆಗೆ ಬಿಟ್ಟ ಕೆಲವು ದತ್ತಿಗಳ ಉಲ್ಲೇಖಗಳಿವೆ. ಈ ಗ್ರಾಮವು ಸೊಲ್ಲಾಪುರ ಜಿಲ್ಲೆಗೆ ಸೇರಿತ್ತೆಂಬುದೂ ಸಹ ಹಿಂದಿನ ಕಾಗದ ಪತ್ರಗಳ ಅಭ್ಯಾಸದಿಂದ ತಿಳಿದು ಬರುತ್ತದೆ.

## ತೊರವೆ ರಾಮಾಯಣ

ಈ ಗ್ರಾಮದ ನಿವಾಸಿಯಾದ ನರಹರಿ ಎಂಬ ಬ್ರಾಹ್ಮಣನು ತನ್ನ ಆರಾಧ್ಯ ದೇವನಾದ ನರಸಿಂಹನನ್ನು ಮುಂದಿಟ್ಟುಕೊಂಡು ರಾಮಾಯಣ ಕಾವ್ಯವನ್ನು ರಚಿಸಿದ್ದಾನೆ. ಅದನ್ನೇ "ತೊರವೆ ರಾಮಾಯಣ" ಎಂದು ಕರೆಯುತ್ತಾರೆ. "ಕುಮಾರ ವಾಲ್ಮೀಕಿ''ಎಂಬುದು ಕಾವ್ಯಕರ್ತೃವು ಇಟ್ಟುಕೊಂಡ ಹೆಸರಾಗಿದೆ. ಈ ಕವಿಯು ತನ್ನ ಕೃತಿಯಲ್ಲಿ ಪರೋಕ್ಷನಾಗಿ ಸಿಂಘಣ ದೇವನನ್ನು ಹೊಗಳಿದುದರಿಂದ ಯಾದವ ಕುಲದ ಮೇಲೆ ಆವನಿಗಿರುವ ಅಭಿಮಾನವನ್ನು ನಾವು ಗುರುತಿಸಬಹುದಾಗಿದೆ. ಹೀಗಿದ್ದರೂ ಸಹ ಕವಿಯು ತನ್ನ ಕೃತಿಯಲ್ಲಿ ಆರಾಧ್ಯ ಮೂರ್ತಿಯಾದ ನರಸಿಂಹನನ್ನು ಗುಹಾವಾಸಿ ಎಂದು ಎಲ್ಲಿಯೂ ಸಂಬೋಧಿಸದಿರುವುದು ಆಶ್ಚರ್ಯವೆನಿಸುತ್ತದೆ.

ಚಾರುತರ ಕರ್ನಾಟಕದ ಲೀ।
ಸಾರ ರಾಮಾಯಣದ ಕರ್ತೃ ಕು।
ಮಾರ ವಾಲ್ಮೀಕಿಯೇ ಕಥಾಪತಿ
ತೊರವೆಯಧಿನಾಥ॥
ವೀರ ನರಹರಿಯೆನಲು ಮೆಚ್ಚದ।
ರಾರು ಸತ್ಕವಿತಾ ವಿಲಾಸದ।
ಸೂರಿಗಳ ಹೃದಯಾಕರುಷಣದ
ಕಥಾ ಕುತೂಹಲವ॥

ತೊರವೆಯ ರಾಮಾಯಣದ ಬಾಲಾಕಾಂಡದಲ್ಲಿ ಕವಿಯು ತಾನು ಕರ್ನಾಟಕ ದೇಶದವನೆಂಬ ಮಾತನ್ನು ಸ್ಪಷ್ಟಪಡಿಸಿದ್ದಾನೆ. ಅಲ್ಲದೆ ತೊರವೆ ತನ್ನ ಗ್ರಾಮವೆಂದೂ ರಾಮಾಯಣದ ಕರ್ತೃ ಕುಮಾರ ವಾಲ್ಮೀಕಿಯಾದ ನರಹರಿ ಎಂಬುದನ್ನೂ ಎತ್ತಿ ತೋರಿಸಿದ್ದಾನೆ. ಇದೇ ರೀತಿಯಲ್ಲಿ

... ... ಅನತ ಜನದಯಾ ಸುರ।
ಭೂಜ ತೊರವೆಯರಾಯ ನರಹರಿ
ಪಾಲಿಸುಗೆ ಜಗವ॥

—ಎಂದೂ, ಗ್ರಂಥ ಸಮಾಪ್ತಿಗೊಳಿಸುವ ಕಾಲದಲ್ಲಿ

... ... ಸಕಲ ಭಕ್ತಜ।
ನಂಗಳಿಗೆ ಸುಖ ರಾಯ ತೊರವೆಯ।
ಮಂಗಳಶ್ರೀ ಮೂರ್ತಿ ನರಕೇಸರಿಯ
ಕಾವ್ಯದಲಿ॥

ಎಂದೂ ಹೇಳಿದ್ದಾನೆ.

ಮಹಾಕವಿಯಾದ ವಾಲ್ಮೀಕಿಯು ರಚಿಸಿದ ಸಂಸ್ಕೃತ ರಾಮಾಯಣವನ್ನೇ ಮೂಲವನ್ನಾಗಿಟ್ಟುಕೊಂಡು ರಚಿತವಾದ ಈ ಕನ್ನಡ ಕಾವ್ಯವು ಪರಿಣತರಾದ ವಿದ್ವಾಂಸರಿಗೆ ರಸದೌತಣವನ್ನೀಯಬಲ್ಲುದಾಗಿದೆ. ಈ ಗ್ರಂಥವನ್ನು ನಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲೆಂದು ಶಾಲೆ, ಕಾಲೇಜುಗಳಲ್ಲಿ ಪಠ್ಯಪುಸ್ತಕವೆಂದು ಬಳಸಲಾಗುತ್ತಿದೆ.

ಜೀರ್ಣೋದ್ಧಾರ:

ತೊರವೆಯ ನರಸಿಂಹದೇವಾಲಯವನ್ನು ಇಂದು ಆಧುನಿಕ ರೀತಿಯಲ್ಲಿ ಜೀರ್ಣೋದ್ಧಾರ ಮಾಡಲು ಪ್ರಯತ್ನಗಳು ನಡೆದಿವೆ, ನರಸಿಂಹನ ಒಕ್ಕಲು ಮನೆತನದವರೆಲ್ಲ ಕೂಡಿಕೊಂಡು ದೇವಸ್ಥಾನದ ಹೆಸರಿನಲ್ಲಿ ಧರ್ಮ ಸಂಸ್ಥೆಯನ್ನಾರಂಭಿಸಿದ್ದಾರೆ. ಈ ಸಂಸ್ಥೆಯ ಆಶ್ರಯದಲ್ಲಿ ದೇವಸ್ಥಾನದ ತುಂಬ ವಿದ್ಯುದ್ದೀಪಗಳು ಬೆಳಗುವಂತಾಗಿವೆ. ಕತ್ತಲೆಯಲ್ಲಿ ಕುಳಿತಿರುವ ಈ ದೇವನನ್ನು ವಿದ್ಯುದ್ದೀಪದ ಬೆಳಕಿನಲ್ಲಿ ಕಣ್ತುಂಬ ನೋಡಬಹುದಾಗಿದೆ. ಪಾಕಶಾಲೆ ಹಾಗೂ ನೀರಿನ ವ್ಯವಸ್ಥೆಗಳಾಗಿವೆ. ಉಪನಯನ, ವಿವಾಹಗಳು ಏರ್ಪಟ್ಟಲ್ಲಿ ಅದಕ್ಕೆ ತಕ್ಕಂತಹ ರೀತಿಯಲ್ಲಿ ಕಲ್ಯಾಣಮಂಟಪದ ಏರ್ಪಾಟಾಗಿದೆ. ಈ ಎಲ್ಲ ಕೆಲಸ ಕಾರ್ಯಗಳಿಗೆ ನರಸಿಂಹ ಭಕ್ತರ ಉದಾರವಾದ ಸಹಾಯವೂ ಬರತೊಡಗಿದೆ.

---

( 19ನೇ ಪುಟದಿಂದ )

ಪೂರ್ವದ ಇತಿಹಾಸವಿದೆ. ನಮ್ಮ ಪ್ರಾಚೀನ ಋಷಿಗಳು ಸೂರ್ಯನನ್ನು ಸಾಕ್ಷಾತ್ ದೇವರೆಂದು ಬಗೆದು ಆರಾಧಿಸಿದರು. ಸೂರ್ಯೋಪಾಸನೆಯು ಕೇವಲ ಭಾರತದಲ್ಲೇ ಅಲ್ಲ. ವಿದೇಶಗಳಲ್ಲಿಯೂ ಸಹ ಪ್ರಚಲಿತವಾಗಿದ್ದಿತು. ಆದರೆ ಆಧುನಿಕ ವಿಜ್ಞಾನವು ಬೆಳೆಯುತ್ತಾ ಸೂರ್ಯೋಪಾಸನೆಯು ಮೂಲೆಗುಂಪಾಯಿತು.

ಸೂರ್ಯನೇ ಪಂಚಭೂತಗಳ ಉತ್ಪತ್ತಿಗೆ ಕಾರಣ. ಸೂರ್ಯನಿಗೂ ಜೀವಿಗೂ ಪರಸ್ಪರ ಸಂಬಂಧವಿದೆ. ಸೂರ್ಯನಿಲ್ಲದೆ ಮಳೆಯಿಲ್ಲ; ಮಳೆಯಿಲ್ಲದೆ ಬೆಳೆಯಿಲ್ಲ; ಬೆಳೆಯಿಲ್ಲದೆ ಜೀವನವಿಲ್ಲ. ಹೀಗೆ ಸೂರ್ಯ ಜೀವಕಾರಕನಾದ. ಋತುಭೇದಗಳುಂಟಾದುವು, ಹಣ್ಣು ಮಾಗುವುದು, ಹಕ್ಕಿ ಹಾರುವುದು, ಜೀವಿ ಬೆಳೆಯುವುದು, ಎಲ್ಲಕ್ಕೂ ಸೂರ್ಯನೇ ಕಾರಣನಾದ. ಮಾನವದೇಹದ ಬೆಳವಣಿಗೆಗೆ ಆರೋಗ್ಯ ಹಾಗೂ ದೃಢಕಾಯತೆಗೆ ಸೂರ್ಯನ ಶಾಖದಷ್ಟೇ ಆತನ ಬೆಳಕೂ ಅತ್ಯಾವಶ್ಯಕ.

ಸೂರ್ಯ ಶಾಖ ಹಾಗೂ ಬೆಳಕಿನ ಆಕರವಾಗಿದ್ದಾನೆ. ಉಳಿದೆಲ್ಲ ಬೆಳಕಿನ ಹಾಗೂ ಶಾಖದ ಆಕರಗಳು ಸೂರ್ಯನಿಂದ ಆದವುಗಳೇ. ಸೂರ್ಯನ ಬೆಳಕು ಬಣ್ಣಗಳ ಆಗರ. ಆತನ ಬೆಳಕಿನಿಂದಾಗಿ ಚರ್ಮದ ಬಣ್ಣವು ಕಾಪಾಡಲ್ಪಡುತ್ತದೆ. ಈ ಬಣ್ಣವೇನಾದರೂ ಹಾರಿಹೋದರೆ ಅಸಹ್ಯವಾದ 'ತೊನ್ನುರೋಗ'ವು ಪ್ರಾಪ್ತವಾಗುತ್ತದೆ.

ಪ್ರಕೃತಿಯಲ್ಲಿ ಮೂಲಭೂತವಾಗಿರುವ ಕೆಂಪು, ಹಳದಿ ಮತ್ತು ನೀಲಿ ಬಣ್ಣಗಳು ಸೂರ್ಯನ ಬೆಳಕಿನಲ್ಲಿವೆ. ಈ ಮೂರು ಬಣ್ಣಗಳನ್ನು ಉಪಯೋಗಿಸಿಕೊಂಡು, ಜೊತೆಗೆ ಸೂರ್ಯನ ಶಾಖವನ್ನೂ ಬಳಸಿಕೊಂಡು ಮನುಷ್ಯ, ಪ್ರಾಣಿ ಮತ್ತು ಸಸ್ಯಗಳ ಜೀವಕೋಶಗಳು ಶಕ್ತಿಯನ್ನು ಉತ್ಪಾದನೆ ಮಾಡುತ್ತವೆ. ಸೂರ್ಯನ ಬೆಳಕು ಹೆಚ್ಚಾಗಿ ಮೈಮೇಲೆ ಬೀಳದೆ ಇರುವ ಯಾವ ಜೀವಿಯೇ ಆಗಲಿ, ಅವುಗಳಲ್ಲಿ ಅವಶ್ಯಕ ಶಕ್ತಿ ಉತ್ಪಾದನೆಯಾಗದೆ ರೋಗಗ್ರಸ್ತವಾಗುತ್ತವೆ ಹಾಗೂ ಕೃಶವಾಗುತ್ತವೆ.

ಕ್ರಿಮಿನಾಶಕವಾಗಿ ಸೂರ್ಯರಶ್ಮಿ:– ಸೂರ್ಯಕಿರಣವು ಮಾನವನಿಗೆ ಮಾರಕವಾದ ಕ್ರಿಮಿಗಳನ್ನು ಕೊಲ್ಲುತ್ತದೆ. ಆದ್ದರಿಂದಲ್ಲೇ ಅಥರ್ವವೇದದಲ್ಲಿ, 'ಉದ್ಯನ್ನಾದಿತ್ಯಃ ಕ್ರಿಮೀನ್ ಹಂತಿ'ಅಂದರೆ 'ಉದಯಿಸುತ್ತಿರುವ ಸೂರ್ಯನು ಕ್ರಿಮಿಗಳನ್ನು ಕೊಲ್ಲುತ್ತಾನೆ' ಎಂದು ಹೇಳಿದೆ. ಧಾನ್ಯಗಳಿಗೆ ಹುಳು ಬಂದರೆ ಅದನ್ನು ಬಿಸಿಲಿನಲ್ಲಿ ಹಾಕುವ ಉದ್ದೇಶ ಇದೇ ಆಗಿದೆ. ಸೂರ್ಯರಶ್ಮಿಯು ಬೀಳದೆ ಇರುವ ಬಾವಿಯ ನೀರು ಕುಡಿಯಲು ಯೋಗ್ಯವಲ್ಲ. ನೀರಿನಲ್ಲಿ ತೋಯಿಸಲಾಗದ ಕೆಲವು ಬಟ್ಟೆಗಳನ್ನು ಅಶೌಚದ ಕಾಲದಲ್ಲಿ ಬಿಸಿಲಿನಲ್ಲಿ ಹಾಕುವ ಉದ್ದೇಶವೂ ಸಹ ಕ್ರಿಮಿನಾಶಕವೇ ಆಗಿದೆ. ಆದ್ದರಿಂದಲೇ ಉದಯಿಸಿ ಬರುತ್ತಿರುವ ಸೂರ್ಯದೇವನನ್ನು ಋಗ್ವೇದವು ಹೀಗೆ ಸ್ತೋತ್ರಮಾಡಿದೆ.

---

(20ನೇ ಪುಟದಿಂದ)

ನಿಂದ ಇದ್ದು ಒಣಗಿದ್ದ ಪುರಾತನ ಅಶ್ವತ್ಥವು ಮತ್ತೆ ಚಿಗುರಿ ಈಗ ಹಸಿರಾಗಿ ಕಂಗೊಳಿಸುತ್ತಿದೆ ಎಂದೂ ತಿಳಿದು ಬರುತ್ತೆ. ಅತಿವಿಸ್ತಾರವಾಗಿ ಹರಡಿ ಕೊಂಡಿರುವ ಈ ಬ್ರಹ್ಮಾಶ್ವತ್ಥದ ನೆರಳು, ಅನೇಕ ಪಯಣಿಗರಿಗೆ ಆಸರೆ ನೀಡುವ ತಂಪಿನ ತಾಣವಾಗಿದೆ. ಈ ಬ್ರಹ್ಮಾಶ್ವತ್ಥದಡಿಯಲ್ಲಿ ತಪಸ್ಸು ಮಾಡುತ್ತಾ ಕೂತಿದ್ದ ಅಗಸ್ತ್ಯ ಮಹರ್ಷಿಗಳಿಗೆ, ಲಿಂಗ ಪ್ರತಿಷ್ಠಾಪನೆ ಮಾಡಬೇಕೆಂಬ ಮನಸ್ಸಾಯಿತು. ಅದಕ್ಕಾಗಿ ಒಂದು ಮುಹೂರ್ತವನ್ನೂ ಗೊತ್ತು ಮಾಡಿ, ಹನುಮಂತನನ್ನು ಕರೆದು, ಕಾಶಿಯಿಂದ ಪೂಜೆಗೆ ಯೋಗ್ಯವಾದ ಲಿಂಗವನ್ನು ಅರಿಸಿ ತರುವಂತೆ ಹೇಳಿ ಕಳುಹಿಸಿದರು. ಅದರಂತೆ ಹನುಮಂತನು ಕಾಶಿ ತಲುಪಿ, ಲಿಂಗವನ್ನು ಅರಿಸಿ ತಂದನು.

ಇತ್ತ ಮುಹೂರ್ತದ ವೇಳೆ ಮೀರಿತು. ಹನುಮಂತನಾದರೋ ವಾಯುಪುತ್ರ, ಕ್ಷಣಮಾತ್ರದಲ್ಲಿ ತರಬಲ್ಲವನೆಂದು ಕಳುಹಿಸಿದರೂ ಇನ್ನೂ ಬರಲಿಲ್ಲ. ಇನ್ನು ತಡಮಾಡುವಂತಿಲ್ಲವೆಂದು ಅಗಸ್ತ್ಯರು ಮರಳುಲಿಂಗವನ್ನು ಸ್ಥಾಪಿಸಿ ಅದಕ್ಕೆ ಪ್ರಾಣಪ್ರತಿಷ್ಠೆಯನ್ನು ಮಾಡಿಬಿಟ್ಟರು. ಇದನ್ನರಿತ ವಾಯುಪುತ್ರನಿಗೆ ಕೋಪಬಂತು. ಅಗಸ್ತ್ಯರಿಂದ ಪೂಜಿಸಿಕೊಂಡಿದ್ದ ಆ ಲಿಂಗದ ನೆತ್ತಿಯಮೇಲೆ ತನ್ನ ಬಿಗಿದ ಮುಷ್ಟಿಯಿಂದ ಬಲವಾಗಿ ಗುದ್ದಿದನು. ಆ ಕಾರಣದಿಂದ ಲಿಂಗದ ನೆತ್ತಿಯಲ್ಲಿ ಗುಳಿಬಿದ್ದು ತಟ್ಟೆಯಾಕಾರವಾಯಿತು. ನಂತರ ಅದರಿಂದ ಗಂಗೆಯು ಉದ್ಭವವಾಯಿತು. ಈ ಕಾರಣದಿಂದಲೇ ಇಂದಿಗೂ ಅಗಸ್ತ್ಯೇಶ್ವರ ಲಿಂಗದ ಮೇಲಿನ ನೆತ್ತಿಯಿಂದ ಸದಾಕಾಲವೂ ಇರುವ ನೀರಿನಿಂದಲೇ, ಇಲ್ಲಿಗೆ ಬರುವ ಭಕ್ತವೃಂದಕ್ಕೆ ತೀರ್ಥವನ್ನು ಕೊಡುವುದನ್ನು ಕಾಣಬಹುದು.

ಆಂಜನೇಯನ ಕೋಪವನ್ನು ಅರ್ಥಮಾಡಿಕೊಂಡ ಅಗಸ್ತ್ಯರು ಅವನನ್ನು ಸಮಾಧಾನಪಡಿಸಿ, ನೀನು ತಂದ ಲಿಂಗಕ್ಕೇ ಮೊದಲ ಪೂಜೆ ಆಗಲಿ, ಎಂದು ಹೇಳಿ ಊರ ಬಾಗಿಲಲ್ಲಿ ಆ ಲಿಂಗವನ್ನು ಪ್ರತಿಷ್ಠಿಸಿದರು. ಪಂಚಲಿಂಗಗಳಲ್ಲಿ ಒಂದಾದ ಹನುಮಂತೇಶ್ವರ ಇದೇ ಆಗಿದೆ.

ಇಲ್ಲಿಯ ಗುಂಜಾ ನರಸಿಂಹ ದೇವಾಲಯದೊಳಗೆ, ಸುತ್ತಲೂ ಇರುವ ಕಂಬಗಳ ಮಂಟಪ ವಾಲಿ ನಿಂತಿರುವುದನ್ನು ಕಾಣಬಹುದು. ಅದಕ್ಕೆ ಕಾವೇರಿಯ ಪ್ರವಾಹದ ಅಲೆಗಳ ಅಪ್ಪಳಿಸುವಿಕೆಯೇ ಕಾರಣ ಎನ್ನುತ್ತಾರೆ. 1924ರಲ್ಲಿ ಕಾವೇರಿ ದೇವಾಲಯದ ಲಕ್ಷ್ಮೀ ನರಸಿಂಹನ ಕಂಠದವರೆಗೂ, 1961ರಲ್ಲಿ ಇದೇ ದೇವರ ಸೊಂಟದವರೆಗು ನೀರು ನುಗ್ಗಿ ರಭಸದಿಂದ ಹರಿದಿತ್ತು ಎಂಬುದು ಅಲ್ಲಿನ ಪ್ರತ್ಯಕ್ಷ ದರ್ಶಿಗಳ ಹೇಳಿಕೆ ಆಗಿದೆ. ಅದು ಏನೇ ಇರಲಿ, ಪೀಸಾದ ಗೋಪುರದಂತೆ, ಗುಂಜಾ ನರಸಿಂಹ ದೇವಾಲಯದ ಸುತ್ತಲಿನ ಕಂಬಗಳ ಮಂಟಪ ವಾಲಿರುವುದು (ಬಗ್ಗಿರುವುದು) ಚೆನ್ನಾಗಿ ಕಂಡುಬರುತ್ತೆ. ಈ ಮಂಟಪ ಮೇಲ್ಭಾಗದಲ್ಲಿ ಕೈ ಕಾಲುಗಳನ್ನು ಕಳೆದುಕೊಂಡು ಭಿನ್ನವಾಗಿರುವ ನವ ನಾರಸಿಂಹರ ಮೂರ್ತಿಗಳನ್ನು ಕಾಣಬಹುದು.

ದೇವಾಲಯದ ಹೊಸಲಿನ ಮೇಲೆ ಕೈಜೋಡಿಸಿ ನಿಂತಿರುವ ಭಕ್ತನೋರ್ವನೇ ಈ ದೇವಾಲಯ ಕಟ್ಟಿದ ಅಗಸ ಎಂತಲೂ, ಒಳಗಿನ ಕಂಬದ ಮೇಲೆ ಇರುವ ಗಂಡು ಹೆಣ್ಣುಗಳೇ ಮೂಗೂರು ಪಾಳೇಗಾರ ದೊರೆ ಮತ್ತು ಅವನ ಹೆಂಡತಿ ಎಂದೂ ಹೇಳಿಕೆ. ಜೊತೆಗೆ ಈ ದೇವಾಲಯದಲ್ಲಿ ಹಳೆಯ ಕಿಲುಬನ್ನು ತೊಳೆದು ಸ್ವಚ್ಛ ಪಡಿಸಿದಾಗ ಕಲ್ಲಿನಲ್ಲಿ ಕೆತ್ತಿದಂತಹ ಹಲ್ಲಿ ಕಂಡು ಬಂದಿದೆ.

ಇಲ್ಲಿ ದೇವರಸೇವೆಗೆ ಬಂದ ಜನ ಮೊದಲು ಈ ಸಂಗಮದಲ್ಲಿ ಸ್ನಾನಮಾಡವೆನೆಂದು ಇಳಿದಾಗ ಹೇಳುವ ಸಂಕಲ್ಪದಲ್ಲೂ ಸಹ, ಕಾವೇರಿ, ಕಪಿಲ, ಸ್ಫಟಿಕ ಸರೋವರ ತ್ರಿವೇಣೀ ಸಂಗಮ, ಭಾಸ್ಕರ ಕ್ಷೇತ್ರ, ಲಕ್ಷ್ಮೀನರಸಿಂಹ, ಗುಂಜಾ ಸನ್ನಿಧಿ, ಪಂಚಲಿಂಗ ಸನ್ನಿಧಿಯ ಕಾವೇರಿ ಸ್ನಾನ ಮಾಡುವೆ ಎಂದಿದೆ

ಈ ಗುಂಜಾ ನರಸಿಂಹ ದೇವಾಲಯದಲ್ಲಿ ಆಂಜನೇಯನ ಮೂರ್ತಿ ಇರುವುದರಿಂದ ಇದು ವ್ಯಾಸರಾಯರ ಕಾಲದ್ದು ಎಂದು ಹೇಳಿಕೆ. ಈಚೆಗೆ ಇಲ್ಲಿ ಹೊಸರಾಗಿ ವ್ಯಾಸರಾಯರ ಮಠವೂ ಆಗಿದೆ.

ಒಟ್ಟಿನಲ್ಲಿ ತಿರುಮಕೂಡಲು ನರಸೀಪುರ ಪುರಾಣ ಪ್ರಸಿದ್ಧ ದಿವ್ಯಕ್ಷೇತ್ರ. ದಕ್ಷಿಣ ಕಾಶಿ ಪ್ರಯಾಗವೆಂದು ಅನಿಸಿಕೊಂಡಿದೆ. ★

ಉದ್ಯನ್ನದ್ಯ ಮಿತ್ರ
ಆರೋಹನ್ನುತ್ತರಾಂ ದಿವಮ್ ।
ಹೃದ್ರೋಗಂ ಮಮಸೂರ್ಯ
ಹರಿಮಾಣಂ ಚ ನಾಶಯ ॥

"ಹೇ ಸೂರ್ಯದೇವ, ದಿವ್ಯತೇಜಸ್ಸುಳ್ಳ ನೀನು ಉದಯಿಸಿ, ನನ್ನ ಹೃದಯರೋಗವನ್ನೂ ಮತ್ತು ಹಳದಿಕಾಮಾಲೆಯನ್ನು ನಾಶನಮಾಡು" ವೇದಗಳಲ್ಲಿ ಇಂತಹ ಋಕ್ಕುಗಳನ್ನು ಅಗಣಿತವಾಗಿ ನೋಡಬಹುದು.

ರೋಗಪರಿಹಾರಕವಾಗಿ ಸೂರ್ಯರಶ್ಮಿ:–ವೇದಗಳಷ್ಟೇ ಅಲ್ಲ. ಪುರಾಣಗಳಲ್ಲಿಯೂ ಸಹ ಸೂರ್ಯರಶ್ಮಿಯು ರೋಗಪರಿಹಾರಕವೆಂದು ಹೇಳಿದೆ. ಉದಾಹರಣೆಗಾಗಿ 'ಸ್ಕಾಂದಪುರಾಣ' ದಲ್ಲಿ ಸೂರ್ಯನನ್ನು ಹೀಗೆ ಪ್ರಾರ್ಥಿಸಿದೆ.

ದದ್ರುಸ್ಫೋಟಕ ಕುಷ್ಠಾಗ್ನಿ
ಮಂಡಲಾನಿ ವಿಷೂಚಿಕಾ ।
ಸರ್ವವ್ಯಾಧಿ ಮಹಾರೋಗಾ
ಭೂತಬಾಧಾ ಸ್ತಥೈವಚ ॥

ಅಂದರೆ ಸೂರ್ಯರಶ್ಮಿಯಿಂದ ದೇಹದ ಮೇಲಿನ ಬೊಕ್ಕೆ, ತುರಿ, ಕುಷ್ಠ ಮುಂತಾದ ಚರ್ಮರೋಗಗಳೂ, ಮಹಾರೋಗಗಳೂ, ಸರ್ವವ್ಯಾಧಿಗಳೂ ನಿವಾರಣೆಯಾಗುತ್ತವೆ. ಆದ್ದರಿಂದಲೇ ಋಗ್ವೇದದಲ್ಲಿ, 'ಆರೋಗ್ಯಂ ಭಾಸ್ಕರಾದಿಚ್ಛೇತ್' ಅಂದರೆ ಆರೋಗ್ಯವನ್ನು ಸೂರ್ಯನಿಂದ ಪಡೆಯಬೇಕು ಎಂದು ಹೇಳಿದೆ.

ಇಂತಹ ಪುರಾಣೋಕ್ತ ವಾಕ್ಯಗಳನ್ನು ಬರೆಯುತ್ತಾ ಹೋದರೆ ಅದೇ ಒಂದು ಗ್ರಂಥವಾಗುತ್ತದೆ. ಸೂರ್ಯರಶ್ಮಿಯ ಮಹತ್ತನ್ನು ಮನವರಿಕೆ ಮಾಡಲು ಕೇವಲ ಒಂದನ್ನು ಮಾತ್ರ ಉದಾಹರಿಸಿದೆ.

ಇಂತಹ ಸೂರ್ಯರಶ್ಮಿಯನ್ನು ರೋಗನಿವಾರಣೆಗೆ ಉಪಯೋಗಿಸಿಕೊಳ್ಳುವ ಬಗೆಯೇ 'ಸೂರ್ಯಚಿಕಿತ್ಸೆ' (Sun treatment).

ಸೂರ್ಯಚಿಕಿತ್ಸೆಯಲ್ಲಿ ಎರಡು ವಿಧ:–

೧. ಸೂರ್ಯಸ್ನಾನ (Sun bath)
೨. ವರ್ಣಚಿಕಿತ್ಸೆ (Chromopathy)

ಸೂರ್ಯಸ್ನಾನ:– ಸೂರ್ಯರಶ್ಮಿಗೆ ಮೈಯೊಡ್ಡುವುದೇ ಸೂರ್ಯಸ್ನಾನವೆಂದು ಸ್ಥೂಲವಾಗಿ ಹೇಳಬಹುದು.

ಸೂರ್ಯಸ್ನಾನದ ನಿಯಮಗಳು ;–ಯಾವುದೇ ಕ್ರಮಬದ್ಧವಾದ ವೈದ್ಯಕೀಯ ಚಿಕಿತ್ಸೆಯು ಸಹಜವಾಗಿಯೇ ಕೆಲವು ನಿಯಮಗಳನ್ನು ವಿಧಿಸುತ್ತದೆ, ಸೂರ್ಯಸ್ನಾನವೂ ಸಹ ಅದಕ್ಕೆ ಹೊರತಾಗಿಲ್ಲ.

೧. ಸ್ನಾನದವೇಳೆ :– ಸೂರ್ಯಸ್ನಾನವನ್ನು ಸೂರ್ಯೋದಯವಾದ ೪ ಗಂಟೆಯೊಳಗೆ, ಸೂರ್ಯಾಸ್ತಮಾನಕ್ಕೆ ೩ ಗಂಟೆ ಪೂರ್ವಭಾವಿಯಾಗಿ ಅಸ್ತಮಾನದವರೆಗೂ ಮಾಡಬಹುದು. ಇದು ಸಾಮಾನ್ಯ ನಿಯಮ. ಇದನ್ನು ಹವಾಮಾನ, ಋತುಮಾನ ಹಾಗೂ ದೇಹಸ್ಥಿತಿಗಳಿಗನುಸಾರವಾಗಿ ವ್ಯತ್ಯಾಸಮಾಡಿಕೊಳ್ಳಬಹುದು. ಮುಖ್ಯವಾಗಿ ಸೂರ್ಯಸ್ನಾನದ ವೇಳೆಯಲ್ಲಿ ದೇಹವು ಆಯಾಸಗೊಳ್ಳದಂತೆ ಎಚ್ಚರಿಕೆಯಿಂದ ಇರಬೇಕಾದ್ದು ಅತ್ಯಾವಶ್ಯಕ.

ವೈದಿಕಮತದ ಪ್ರಕಾರ ಬೆಳಗಿನ ಸೂರ್ಯಸ್ನಾನ ಒಳ್ಳೆಯದು ಎಂಬ ಅಭಿಪ್ರಾಯವಿದೆ. ಆದರೆ ಬೆಳಗಿನ ಸೂರ್ಯರಶ್ಮಿಯಲ್ಲಿ ದೇಹಕ್ಕೆ ಮಾರಕವಾದ ಅತಿನೇರಳೆ ಮತ್ತು ಅತಿಕೆಂಪು (Ultraviolet and infrared) ಕಿರಣಗಳು ಹೆಚ್ಚಾಗಿರುತ್ತವೆ. ಆದರೆ ವೈದ್ಯಶಾಸ್ತ್ರವು ಸಾಯಂಕಾಲದ ಸೂರ್ಯಸ್ನಾನವನ್ನು ಪ್ರಶಂಸಿಸಿ, ಬೆಳಗಿನ ಸೂರ್ಯಸ್ನಾನವನ್ನು ನಿಷೇಧಿಸಿದೆ.

ವೃದ್ಧಾರ್ಕೋ ಹೋಮಧೂಮಶ್ಚ
ಬಾಲಸ್ತ್ರೀ ನಿರ್ಮಲೋದಕಂ ।
ರಾತ್ರೌ ಕ್ಷೀರಾನ್ನ ಭುಕ್ತಂ ಚ
ಆಯುರ್ವೃದ್ಧಿಂ ದಿನೇದಿನೇ ॥

ಅಂದರೆ ಸಾಯಂಕಾಲದ ಸೂರ್ಯಸ್ನಾನ, ಹೋಮದಿಂದ ಏಳುವ ಹೊಗೆಯ ಪಾನ, ತನಗಿಂತಲೂ ಕಡಿಮೆ ವಯಸ್ಸಿನ ಸ್ತ್ರೀಯನ್ನು ವಿವಾಹವಾಗುವುದು, ಪರಿಶುದ್ಧವಾದ ಜಲಪಾನ, ರಾತ್ರಿ ಹಾಲಿನೂಟ–ಇವು ನಮ್ಮ ಆಯುಷ್ಯವನ್ನು ವರ್ಧಿಸುತ್ತವೆ. ಇದಕ್ಕೆ ಪ್ರತಿಯಾಗಿ,

ಬಾಲಾರ್ಕೋ ಪ್ರೇತಧೂಮಶ್ಚ
ವೃದ್ಧಸ್ತ್ರೀ ಪಲ್ವಲೋದಕಂ ।
ರಾತ್ರೌ ದಧ್ಯನ್ನ ಭುಕ್ತಂಚ
ಆಯುಃ ಕ್ಷೀಣಂ ದಿನೇ ದಿನೇ ॥

ಅಂದರೆ ಬೆಳಗಿನ ಸೂರ್ಯಸ್ನಾನ, ಸ್ಮಶಾನದಲ್ಲಿ ಏಳುವ ಧೂಮಪಾನ, ತನಗಿಂತಲೂ ದೊಡ್ಡವಳನ್ನು ಮದುವೆಯಾಗುವುದು. ಕೊಳೆತ ನೀರು, ರಾತ್ರಿ ಮೊಸರಿನೂಟ – ಇವು ಆಯುಷ್ಯವನ್ನು ಕಡಿಮೆಮಾಡುತ್ತವೆ. ಹೀಗಿದ್ದರೂ ಸಹ ಏಕೆ ಬೆಳಗಿನ ಸ್ನಾನವನ್ನು ಅನುಮೋದಿಸಿದರೋ ಅದು ಇಂದಿಗೂ ಸಹ ಚರ್ಚಾಸ್ಪದ ವಿಷಯವಾಗಿಯೇ ಇದೆ. ಆದರೂ ಕೆಲವು ಸಂದರ್ಭಗಳಲ್ಲಿ ಬೆಳಗಿನ ಸೂರ್ಯಸ್ನಾನದ ಅವಶ್ಯಕತೆಯಿದೆ.

೨. ಅವಧಿ:— ಪ್ರಾರಂಭಕಾಲದಲ್ಲಿ ಸೂರ್ಯಸ್ನಾನವನ್ನು ಕೇವಲ ೧೦ ರಿಂದ ೧೫ ನಿಮಿಷಗಳವರೆಗೆ ಆಚರಿಸುತ್ತಾ ಕ್ರಮೇಣ ಕಾಲವನ್ನು ಹೆಚ್ಚಿಸುತ್ತಾ ೩೦ ರಿಂದ ೪೦ ನಿಮಿಷಗಳವರೆಗೆ ನಡೆಸಬಹುದು.

೩. ಆಹಾರ ನಿಯಮ:— ಸೂರ್ಯಸ್ನಾನವನ್ನು ಬರಿಹೊಟ್ಟೆಯಲ್ಲಿಯೇ ಆಚರಿ ಬೇಕು. ಆದರೆ ದುರ್ಬಲರು ಸೂರ್ಯಸ್ನಾನಕ್ಕೆ ಅರ್ಧಗಂಟೆ ಮುಂಚಿತವಾಗಿ ದ್ರವಾಹಾರವನ್ನು ತೆಗೆದುಕೊಳ್ಳಬಹುದು. ಇತರರು ಒಂದು ಲೋಟ ತಣ್ಣೀರು ಕುಡಿದು ನಂತರ ಸೂರ್ಯಸ್ನಾನಮಾ ಬೇಕು. ಇದಕ್ಕೆ 'ಉಷಃಪಾನ'ವೆಂದು ಹೆಸರು ವೈದ್ಯಶಾಸ್ತ್ರದಲ್ಲಿ ಉಷಃಪಾನದ ಬಗ್ಗೆ ಹೀ ಹೇಳಿದೆ.

ಭೋಜನಾಂತೇ ಪಿಬೇತ್ತಕ್ರಂ
ವಾಸರಾಂತೇ ಪಯಃ ಪಿಬೇತ್
ನಿಶಾಂತೇ ಚ ಪಿಬೇದ್ವಾರಿ
ತ್ರಿಭೀರೋಗೋ ನ ಜಾಯತೇ

ಅಂದರೆ ಊಟವಾದಮೇಲೆ ಮಜ್ಜಿಗೆಯನ್ನೂ ರಾತ್ರಿ ಹಾಲನ್ನೂ, ಬೆಳಗಿನಝಾವ ನೀರನ್ನೂ ಕುಡಿಯುವುದರಿಂದ ರೋಗನಿವಾರಣೆಯಾಗು ದಿರಲಿ, ಉಂಟಾಗುವುದೇ ಇಲ್ಲ. ಆದರೆ ಹಾಲನ್ನು ಬೆಳಗ್ಗೆ ಕುಡಿಯಬಾರದು. "ದಿವಾಕ್ಷೀರಪಾನ ಸರ್ವಥಾ ನಿಷಿದ್ಧಂ" ಎಂಬುದಾಗಿ ಹೇಳಿದ್ದಾರೆ.

೪. ಉಡುಪು:— ಪ್ರಾರಂಭದಿಶೆಯ ತೆಳ್ಳಗಿರುವ ಹತ್ತಿಬಟ್ಟೆಧರಿಸಿ ಸೂರ್ಯಸ್ನಾ ಮಾಡುವುದೊಳ್ಳಿತು. ಅಭ್ಯಾಸವಾದನಂತ ವಸ್ತ್ರಗಳನ್ನು ಸ್ವಲ್ಪಸ್ವಲ್ಪವಾಗಿ ಕಡಿಮೆಮಾಡುತ್ತಾ 'ನಗ್ನಸೂರ್ಯಸ್ನಾನ'ಕ್ಕೆ ಅಣಿಯಾಗಬೇಕು ನಗ್ನಸೂರ್ಯಸ್ನಾನವೆಂದರೆ ಬರಿಮೈಯ ಮಾಡುವ ಸೂರ್ಯಸ್ನಾನ. ಇದು ಬಹಳ ಶ್ರೇಷ ವಾದುದು. ಇದಕ್ಕೆ ಕಾರಣ ದೇಹದ ಎ ಭಾಗವೂ ಸೂರ್ಯರಶ್ಮಿಗೆ ಒಡ್ಡಲ್ಪಡುತ್ತದೆ.

ಕಿರಣಗಳು ತೀಕ್ಷ್ಣವಾಗಿದ್ದರೆ ತಲೆಗೆ ತಣ್ಣೀ ಬಟ್ಟೆ ಸುತ್ತಬೇಕು. ಕಿರಣಗಳು ಮುಖ ಮೇಲೆ ಬೀಳದಂತೆ ನೋಡಿಕೊಳ್ಳಬೇಕು.

೫. ಸ್ನಾನನಿಯಮ:— ಸೂರ್ಯಸ್ನಾನ ನಂತರ ನಿತ್ಯಸ್ನಾನವನ್ನು ನದಿ ಅಥವಾ ಜಲಾಶಯಗಳಲ್ಲಿ ಮಾಡುವುದು ಒಳ್ಳೆಯದು ಅದು ಸಾಧ್ಯವಾಗದಿದ್ದರೆ ಮನೆಯಲ್ಲೇ ತಣ್ಣೀರ ಸ್ನಾನ ಮಾಡಬೇಕು. ತಣ್ಣೀರಿನ ಸ್ನಾನ ಒಗ್ಗ ದಿದ್ದರೆ ಉಗುರು ಬೆಚ್ಚಗಿನ ಬಿಸಿನೀರಿನಲ್ಲಿ ಸ್ನಾ ಮಾಡಬಹುದು. ಒಂದುವೇಳೆ ಸ್ನಾನಮಾಡಲ ಅಡ್ಡಿಯಿದ್ದರೆ ಒದ್ದೆ ಬಟ್ಟೆಯಿಂದ ಮೈಯನ್ನು ಒರೆ ಕೊಳ್ಳಬಹುದು.

—( ಸಶೇಷ

( 16ನೇ ಪುಟದಿಂದ )

ಹೊಂದಿರುವ ಈ ಸನ್ನಿಧಿಯಲ್ಲಿ ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

'ಪಾಡಗವ್' ಅಥವಾ 'ಪಾಂಡವ ಪೆರುಮಾಳ್'' ಎನ್ನುವುದು ಆರನೆಯ ವಿಷ್ಣುಕ್ಷೇತ್ರ. ಏಕಾಂಬರೇಶ್ವರ ದೇವಾಲಯಕ್ಕೆ ಪಶ್ಚಿಮದಲ್ಲಿ ಒಂದು ಫರ್ಲಾಂಗ್ ದೂರದಲ್ಲಿದೆ. ದೈವ ಪಾಂಡವ ದೂತನಾಗಿದ್ದಾನೆ. ರುಕ್ಮಿಣೀದೇವಿ, ಸತ್ಯಭಾಮ ಹರೀತ ಮಹಾಮುನಿಗಳಿಗೆ ಪ್ರತ್ಯಕ್ಷ. ಪೂದತ್ತಾಳ್ವಾರ್, ಪೇಯಾಳ್ವಾರ್, ತಿರುಮಳಿಸೈ ಆಳ್ವಾರ್, ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

ಏಳನೆಯ ವಿಷ್ಣುಕ್ಷೇತ್ರವಾದ 'ನೀಳಾತ್ತಿಂಗಳ್ ತುಂಡವ್'' ಎನ್ನುವ ಸನ್ನಿಧಿಯು ಏಕಾಂಬ-ರೇಶ್ವರ ಆಲಯದ ಮೊದಲನೆ ಪ್ರಾಕಾರದಲ್ಲಿದೆ. ನೀಳಾತ್ತಿಂಗಳ್ ತುಂಡಾತ್ತಾನ್, ಸೀರೊರುವ ರಿಲ್ಲಾವಲ್ಲಿ ನಾಚ್ಚಿಯಾರ್, ಪುರುಷ ಸೂಕ್ತ ವಿಮಾನಗಳಿಂದ ಕೂಡಿರುವ ಈ ಸನ್ನಿಧಿಯಲ್ಲಿ ದೇವರು ಶಿವನಿಗೆ ಪ್ರತ್ಯಕ್ಷವಾಗಿದ್ದಾನೆ. ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

ಕಂಚಿಯ ರೈಲ್ವೆಸ್ಟೇಷನ್ನಿನಿಂದ ಅರ್ಧಮೈಲಿ ದೂರದಲ್ಲಿರುವ 'ಪರಮೇಚ್ಚುರ ವಿಣ್ಣಗರಂ' ಅಥವಾ 'ವೈಕುಂಠಪೆರುಮಾಳ್'' ಇಲ್ಲಿನ ಎಂಟನೆಯ ವಿಷ್ಣುಕ್ಷೇತ್ರವಾಗಿದೆ. ಪರಮಪದನಾಥ, ವೈಕುಂಠ ನಾಚ್ಚಿಯಾರ್, ಮುಕುಂದ ವಿಮಾನಗಳಿಂದ ಕೂಡಿದ ಇಲ್ಲಿನ ಸ್ವಾಮಿಯು ಪಲ್ಲವ ರಾಯನಿಗೆ ಪ್ರತ್ಯಕ್ಷನಾಗಿ ತಿರುಮಂಗೈ ಆಳ್ವಾರರಿಂದ ಮಂಗಳಾಶಾಸನವನ್ನು ಪಡೆದಿದ್ದಾನೆ.

ದೊಡ್ಡಕಂಚಿಯ ಒಂಬತ್ತನೆ ವಿಷ್ಣುಕ್ಷೇತ್ರವಾದ 'ಕಾರ್ವಾನಂ' ಉಲಗಳನ್ದ ಪೆರುಮಾಳ್ ಸನ್ನಿಧಿಯಲ್ಲಿದೆ. ತಿರುಮಂಗೈ ಆಳ್ವಾರ್‌ರವರು ಮಂಗಳಾಶಾಸನ ಮಾಡಿರುವ ಇಲ್ಲಿನ ಕಳ್ವನ್ ಪೆರುಮಾಳ್ ಮತ್ತು ಕಮಲವಲ್ಲಿ ನಾಚ್ಚಿಯಾರ್‌ರವರುಗಳು ಪುಷ್ಕಲ ವಿಮಾನವನ್ನು ಹೊಂದಿದ್ದು ಪಾರ್ವತಿಗೆ ಪ್ರತ್ಯಕ್ಷರಾಗಿದ್ದಾರೆ.

ದೊಡ್ಡ ಕಂಚಿಗೆ ಪಶ್ಚಿಮದಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಏಳು ಮೈಲಿಗಳ ದೂರದಲ್ಲಿ 'ತಿರುಪ್ಪುಟ್ಕುಳಿ' ಎನ್ನುವ ಕ್ಷೇತ್ರವಿದೆ. ಜಟಾಯುವಿಗೆ ಪ್ರತ್ಯಕ್ಷನಾಗಿರುವ ಇಲ್ಲಿನ ಸ್ವಾಮಿಯು ವಿಜಯ ರಾಘವ ಪೆರುಮಾಳ್ ಎನ್ನುವ ಹೆಸರನ್ನು ಹೊಂದಿದ್ದು, ಮರಕತವಲ್ಲಿ ನಾಚ್ಚಿಯಾರ್, ವಿಜಯಕೋಟಿ ವಿಮಾನಗಳನ್ನು ಹೊಂದಿದ್ದಾನೆ. ತಿರುಮಂಗೈ ಆಳ್ವಾರ್ ರವರು ಮಂಗಳಾಶಾಸನ ಮಾಡಿದ್ದಾರೆ. ಯಾತ್ರಾರ್ಥಿಗಳಿಗೆ ಸ್ವಲ್ಪ ಕಷ್ಟವಾಗುತ್ತದೆ. ಒಂದೇ ದಿನದಲ್ಲಿ ಕಂಚಿಯಿಂದ ಹೋಗಿ ಬರಬಹುದು. ಮಾಶಿ ತಿಂಗಳಲ್ಲಿ ಪುನರ್ವಸು ನಕ್ಷತ್ರದಂದು ಸಮಾಪ್ತಿಯಾಗಿ ಹತ್ತು ದಿನಗಳು ವೈಭವದ ಬ್ರಹ್ಮೋತ್ಸವವು ನಡೆಯುತ್ತದೆ.

ಇದುವರೆವಿಗೆ ವಿವರಿಸಿದ ವಿಷ್ಣು ಕ್ಷೇತ್ರಗಳು ಕಂಚಿಯಲ್ಲಿದ್ದರೂ, ಶಿವ ಕ್ಷೇತ್ರಗಳೊಂದಿಗೆ ಇರುವುದರಿಂದ ಶಿವ-ವಿಷ್ಣುವಿನ ಭೇದಭಾವವನ್ನು ತೊಡೆಯುವಂತೆ ಮಾಡಿವೆ. ಇಂತಹ ಹರಿ-ಹರರ ಸಮಾನತೆಯು ಬೇರೆ ದಿವ್ಯ ಕ್ಷೇತ್ರಗಳಲ್ಲಿ ದೊರೆಯುವುದಿಲ್ಲ.



ಅಲಂಕೃತ ತಾಯಾರ್ ವಿಗ್ರಹ

## ಮದ್ರಾಸ್ ಸುತ್ತಮುತ್ತ

ಆಳ್ವಾರುಗಳ ಸಮಯದಲ್ಲಿ ಮದ್ರಾಸ್ ಸುತ್ತಮುತ್ತ ಪ್ರದೇಶ ಕಂಚಿಯಷ್ಟು ಜನನಿಬಿಡವಾಗಿರಲಿಲ್ಲ. ಅಂತೆಯೇ ಜನಪ್ರಿಯವೂ ಆಗಿರಲಿಲ್ಲ. ಇತ್ತೀಚೆಗಷ್ಟೆ ಜನಸಂದಣಿಯಿಂದ ಕೂಡಿರುವುದು. ಹೀಗಾಗಿ ಇಲ್ಲಿನ ಎಂಟು ಕ್ಷೇತ್ರಗಳೂ ದೂರದೂರವಾಗಿ ಹರಡಿವೆ.

ಮದ್ರಾಸ್‌ನಲ್ಲಿ ಇರುವ 'ತಿರುವಲ್ಲಿ ಕ್ಕೇಣಿ'ಯು ಒಂದು ಪ್ರಮುಖ ದಿವ್ಯಕ್ಷೇತ್ರನಾಗಿದೆ. ಇದನ್ನು ಬೃಂದಾರಣ್ಯ ಕ್ಷೇತ್ರ ಎಂದು ಕರೆಯುತ್ತಿದ್ದರು. ಇಲ್ಲಿನ ಸ್ವಾಮಿಯನ್ನು ವ್ಯಾಸ ಮಹರ್ಷಿಗಳು ಪ್ರತಿಷ್ಠಿಸಿದರು. ಮತ್ತು ಅತ್ರೇಯ ಮಹರ್ಷಿಗಳು ಆರಾಧಿಸುತ್ತಿದ್ದರು ಎಂದು ಪ್ರಸಿದ್ಧಿ ಪಡೆದಿದೆ. ಐದು ತೀರ್ಥಗಳಿಂದ ಸುತ್ತುವರಿಯಲ್ಪಟ್ಟಿರುವ ಕೈರವಣಿ ಸರಸ್ಸು ಇಲ್ಲಿದೆ. ಈ ಕ್ಷೇತ್ರದಲ್ಲಿ ಭೃಗು ಅತ್ರಿ ಇತ್ಯಾದಿ ಸಪ್ತ ಋಷಿಗಳು ತಪಸ್ಸು ಮಾಡಿದರೆಂದು ಪ್ರತೀತಿ. ಆಧುನಿಕ ನಗರೀಕರಣವು ಇಲ್ಲಿನ ಶುಭ್ರ ಪ್ರಾಚೀನತೆಯನ್ನು ಕಲುಷಿತ ಗೊಳಿಸಿದೆ. ಪಾರ್ಥಸಾರಥಿ ರುಕ್ಮಿಣೀ ದೇವಿ, ಇಲ್ಲಿನ ಪ್ರಧಾನ ದೇವರು. ಇಲ್ಲಿನ ಮನ್ನಾಥ (ರಂಗನಾಥ)ನಿಗೆ ಭೃಗು ಮಹರ್ಷಿ ಕನ್ಯಾದಾನ ಮಾಡಿದನಂತೆ. ಪೆರಿಯಾಳ್ವಾರ್, ತಿರುಮಳಿಶೈ ಆಳ್ವಾರ್, ತಿರುಮಂಗೈ ಆಳ್ವಾರರು ಮಂಗಳಾಶಾಸನ ಮಾಡಿದ್ದಾರೆ.

ಮದ್ರಾಸ್ ನಿಂದ ಹನ್ನೆರಡು ಮೈಲಿ ದೂರದಲ್ಲಿನ ಪಲ್ಲಾವರಂ ಸ್ಟೇಷನ್ನಿಗೆ ದಕ್ಷಿಣದ ಎರಡೂವರೆ ಮೈಲಿ ದೂರದಲ್ಲಿ 'ತಿರುನೀರ್ಮಲೈ' ಅಥವಾ 'ಥಂಡಾರಣ್ಯ ಕ್ಷೇತ್ರ'ವಿದೆ. ಮದ್ರಾಸ್‌ನಿಂದ ಇಲ್ಲಿಗೆ ಬಂದು ಹೋಗಲು ಬಸ್‌ಗಳ ಅನುಕೂಲವಿದೆ. ನೀರ್‌ವಣ್ಣರ್, ನೀಲ ಮುಗಿಲ್‌ವಣ್ಣರ್, ರಂಗನಾಥ, ಅಣಿಮಾಮುಲರ್‌ಮಂಗನಾಚ್ಚಿಯಾರ್, ತೋಯಗಿರಿ ಮತ್ತು ಮಣಿಕರ್ಣಿಕಾ ವಿಮಾನಗಳಿಂದ ಕೂಡಿದ ಇಲ್ಲಿನ ಸ್ವಾಮಿಯನ್ನು ಪೂದತ್ತಾಳ್ವಾರ್ ಹಾಗೂ ತಿರುಮಂಗೈ ಆಳ್ವಾರ್‌ರವರು ಮಂಗಳಾಶಾಸನಗಳಿಂದ ಪೂಜಿಸಿದ್ದಾರೆ.

ವಂಡಲೂರ್ ಸ್ಟೇಷನ್ನಿಗೆ ಆಗ್ನೇಯದಲ್ಲಿ ಹತ್ತು ಮೈಲಿಗಳ ದೂರದಲ್ಲಿರುವ ಕೋವಳಕ್ಕೆ ದಕ್ಷಿಣದಲ್ಲಿ ಕೆನಾಲ್ ಮಾರ್ಗದಲ್ಲಿ ಎರಡು ಮೈಲಿಗಳ ದೂರದಲ್ಲಿ 'ತಿರುವಿಡವಂದೈ' ಅಥವಾ 'ಇಡವಂದೈ' ಎನ್ನುವ ದಿವ್ಯಕ್ಷೇತ್ರವಿದೆ. ತುಂಬಾ ಒಳನಾಡಿನಲ್ಲಿರುವುದರಿಂದ ಬಸ್‌ಗಳ ಅನುಕೂಲ ಕಡಿಮೆ. ಈಗ ಇದೊಂದು ಕುಗ್ರಾಮ, ಹೋಟೆಲುಗಳು ಇಲ್ಲ. ಸನ್ನಿಧಿಯ ಪ್ರಸಾದನೆ ಗಟ್ಟಿ. ಚಿತ್ರಿ ತಿಂಗಳಲ್ಲಿ ಶ್ರವಣ ನಕ್ಷತ್ರವು ಸಮಾಪ್ತಿಯಾಗಿ ಹತ್ತುದಿನಗಳವರೆಗೆ ಬ್ರಹ್ಮೋತ್ಸವವು ಜರಗುವುದು. ಇಲ್ಲಿ ನಿತ್ಯ ಕಲ್ಯಾಣಸ್ವಾಮಿ ಮತ್ತು ಕೋಮಲವಲ್ಲಿ ತಾಯಾರ್‌ರವರುಗಳು ಇದ್ದಾರೆ. ಕಲ್ಯಾಣ ವಿಮಾನ, ಕಲ್ಯಾಣ ತೀರ್ಥಗಳಿಂದ ಕೂಡಿದ ಇಲ್ಲಿನ ಸ್ವಾಮಿಯು ಮಾರ್ಕಂಡೇಯನಿಗೆ ಪ್ರತ್ಯಕ್ಷವಾಗಿ, ತಿರುಮಂಗೈ ಆಳ್ವಾರರ ಮಂಗಳಾಶಾಸನವನ್ನು ಪಡೆದಿದ್ದಾನೆ.

ಇಂದು ಬಹಳಷ್ಟು ಪ್ರಸಿದ್ಧವಾಗಿ, ಪ್ರವಾಸೋದ್ಯಮ ಕೇಂದ್ರವಾಗಿರುವ, ಸಮುದ್ರ ತೀರದಲ್ಲಿರುವ 'ಮಹಾಬಲಿ ಪುರ'ವನ್ನು ಹಿಂದೆ 'ತಿರುಕ್ಕಡಲ್‌ಮಲ್ಲೈ' ಎಂದು ಕರೆಯುತ್ತಿದ್ದರು. ಇದೊಂದು ಪ್ರಸಿದ್ಧ ದಿವ್ಯಕ್ಷೇತ್ರ. ಪಾಂಡವರಥಗಳು, ಅರ್ಜುನನು ತಪಸ್ಸು ಮಾಡುವ ಕೆತ್ತನೆಗಳು, ಭಾರತದ ಶಿಲ್ಪಕಲಾ ವೈಭವಕ್ಕೆ ಪ್ರಸಿದ್ಧವಾಗಿವೆ. ಚಿತ್ರಿ ತಿಂಗಳಲ್ಲಿ ವಿಶಾಖಾ ನಕ್ಷತ್ರವು ಅವಸಾನವಾದಂತೆ ಹತ್ತು ದಿನಗಳು ಬ್ರಹ್ಮೋತ್ಸವವು ನಡೆಯುತ್ತದೆ. ಮಾಶಿ ಅಮಾವಾಸ್ಯೆಯಂದು ಇಲ್ಲಿ ಸಮುದ್ರಸ್ನಾನ ಮಾಡುವುದು ಪುಣ್ಯ ವಿಶೇಷವೆಂದು ಜನರು ನಂಬಿದ್ದಾರೆ. ನೀಲ

ಮಂಗೈ ನಾಚ್ಚಿಯಾರ್. ಮತ್ತು ಗಗನಾಕೃತಿ ವಿಮಾನದಿಂದ ಕೂಡಿದ ಇಲ್ಲಿನ ಸ್ಥಲಶಯನತ್ತುರೈವರ್ ಸ್ವಾಮಿಯು ಪುಂಡರೀಕ ಮಹರ್ಷಿಗೆ ಪ್ರತ್ಯಕ್ಷನಾಗಿದ್ದಾನೆ. ಪೂದತ್ತಾಳ್ವಾರ್, ತಿರುಮಳಿಶೈ ಆಳ್ವಾರ್, ತಿರುಮಂಗೈ ಆಳ್ವಾರ್‌ರವರುಗಳು ಇಲ್ಲಿ ಮಂಗಳಾಶಾಸನ ಮಾಡಿದ್ದಾರೆ.

ತಿನ್ನನ್ನೂರ್ ಸ್ಟೇಷನ್ನಿಗೆ ದಕ್ಷಿಣದಲ್ಲಿ ಒಂದು ಮೈಲಿ ದೂರದಲ್ಲಿ 'ತಿರುನಿಂಡ್ರವೂರ್' ಎನ್ನುವ ವಿಷ್ಣುಕ್ಷೇತ್ರವಿದೆ. ಇದೂ ಒಂದು ಕುಗ್ರಾಮ. ಭಕ್ತವತ್ಸಲ ಮತ್ತು ಪತ್ತರಾವಿಪೆರುಮಾಳ್ ಇಲ್ಲಿನ ಸ್ವಾಮಿ. ಶ್ರೀನಿವಾಸ ವಿಮಾನ, ವರುಣ ಪುಷ್ಕರಿಣಿ, ವೃದ್ಧಕ್ಷೀರ ನದಿಗಳಿಂದ ಕೂಡಿದ ಈ ಸ್ವಾಮಿಯನ್ನು ತಿರುಮಂಗೈ ಆಳ್ವಾರ್‌ರವರು ಹಾಡಿ ಹೊಗಳಿ ಮಂಗಳಾಶಾಸನ ಮಾಡಿದ್ದಾರೆ. ಪಂಗುನಿ ತಿಂಗಳಂದು ಶ್ರವಣ ನಕ್ಷತ್ರ ಅವಸಾನವಾದಂತೆ ಹತ್ತೂ ದಿನಗಳು ಬ್ರಹ್ಮೋತ್ಸವವೂ, ಮೂರನೆಯ ದಿನ ಬೆಳಗಿನಜಾವ ಗರುಡೋತ್ಸವವೂ ನಡೆಯುತ್ತವೆ.

'ತಿರುವೆವ್ವುಳ್' ('ತಿರುವೆಳ್ಳೂರ್') ಎನ್ನುವ ವಿಷ್ಣುಕ್ಷೇತ್ರವು ತಿರುವಳ್ಳೂರ್ ಸ್ಟೇಷನ್ನಿಗೆ ಉತ್ತರದಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಎರಡು ಮೈಲಿಗಳ ದೂರದಲ್ಲಿದೆ. ಇದನ್ನು ಹಾರಣ್ಯವನ ಎಂದೂ ಕರೆಯುತ್ತಾರೆ. ವೀರರಾಘವಪೆರುಮಾಳ್, ಕನಕವಲ್ಲಿ ತಾಯಾರ್‌ರಿಂದ ಕೂಡಿದ ಈ ಕ್ಷೇತ್ರವು ವಿಜಯಕೋಟೆ ವಿಮಾನ ಮತ್ತು ಹೃತ್ತಾಪನಾಶ ತೀರ್ಥಗಳಿಂದ ಕೂಡಿದ್ದು ತಿರುಮಂಗೈ ಆಳ್ವಾರರಿಂದ ಮಂಗಳಾಶಾಸನವನ್ನು ಪಡೆದಿದೆ. ಚಿತ್ರಿ ತಿಂಗಳು ಪುನರ್ವಸು ನಕ್ಷತ್ರದ ದಿನದ ಮೊದಲು ಹತ್ತು ದಿನಗಳು ಇಲ್ಲಿ ಬ್ರಹ್ಮೋತ್ಸವವು ನಡೆಯುತ್ತದೆ. ಪ್ರತಿ ಅಮಾವಾಸ್ಯೆಯ ದಿನ ಪ್ರಾರ್ಥನೆಗಳನ್ನು ಸಲ್ಲಿಸಲು ಅಸಂಖ್ಯಾತ ಜನರು ಇಲ್ಲಿಗೆ ಬರುತ್ತಾರೆ. ಆನಿ ಮತ್ತು ತೈ ಮಾಸಗಳ ಅಮಾವಾಸ್ಯೆಯಂದು ಮೂರು ದಿನಗಳ ತೆಪ್ಪೋತ್ಸವವು ಜರುಗುವುದು.

ಮದ್ರಾಸ್‌ಗೆ ವಾಯುವ್ಯದಲ್ಲಿ 40 ಮೈಲಿ ದೂರದಲ್ಲಿರುವ ಚೋಳಿಂಗಪುರ ಸ್ಟೇಷನ್ನಿಗೆ ವಾಯುವ್ಯದಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಎಂಟು ಮೈಲಿಗಳ ದೂರದಲ್ಲಿ 'ತಿರುಘಟ್ಟಿಕೈ' ಅಥವ 'ಘಟಿಕಾಚಲಂ' ಎನ್ನುವ ದಿವ್ಯಕ್ಷೇತ್ರವಿದೆ. ಇ ಅಮೃತವಲ್ಲಿ ನಾಚ್ಚಿಯಾರ್ ಸಮೇತ ಯೋಗ ನರಸಿಂಹರು ಇದ್ದಾರೆ. ಸಿಂಗ ಗೋಷ್ಠೀ ವಿಮಾ ಮತ್ತು ಅಮೃತ ತೀರ್ಥಗಳಿಂದ ಕೂಡಿದ ಸ್ವಾಮಿಯು ಆಂಜನೇಯನಿಗೆ ಪ್ರತ್ಯಕ್ಷನಾ ಪೇಯಾಳ್ವಾರ್, ನಮ್ಮಾಳ್ವಾರ್, ತಿರುಮಂ ಆಳ್ವಾರುಗಳಿಂದ ಮಂಗಳಾಶಾಸನವನ್ನು ಪ ದಿದ್ದಾರೆ. ಇಲ್ಲಿ ಯೋಗಾನರಸಿಂಹರು ಇರು ದರಿಂದ ವ್ಯಾಧಿಗ್ರಸ್ತರು, ಪಿಶಾಚಗ್ರಸ್ತ ಪರಿಹಾರಕ್ಕಾಗಿ ಇಲ್ಲಿಗೆ ಬರುವರು. ವಾಸಿಯಾಗ ರೋಗಗಳು ವಾಸಿಯಾಗುತ್ತವೆ, ಪಿಶಾಚಿಗ ಓಡಿ ಹೋಗುತ್ತವೆ ಎಂಬ ನಂಬಿಕೆ ಜನರಲ್ಲಿ ನರಸಿಂಹರಿಂದ ಸ್ವತಂತ್ರವನ್ನು ಪಡೆ ಆಂಜನೇಯನು ಈ ಕ್ಷೇತ್ರದ ಬಳಿಯಲ್ಲಿನ ಒಂ ಚಿಕ್ಕಬೆಟ್ಟದ ಮೇಲೆ ಒಂಟಿಯಾಗಿ ದಯಮಾಡಿ ಅಲ್ಲಿಗೆ ಬರುವ ವ್ಯಾಧಿಗ್ರಸ್ತರಿಗೆ ಸ್ವಪ್ನದಲ್ಲಿ ವ್ಯಾ ಪರಿಹಾರಗಳನ್ನು ಸೂಚಿಸುವ ನಂಬಿಕೆ ಜನರಲ್ಲಿ

(ವಿವಿಧ ಮೂಲಗಳಿಂದ

# ಕಿಶೋರ ಜಗತ್



ಅನಂತಗಿರಿಯನ್ನು ರಾಜಧರ್ಮ ಎನ್ನುವ ಕಪಿ ಆಳುತ್ತಿದ್ದಿತು. ರಾಜಧರ್ಮ ಹೆಸರಿಗೆ ತಕ್ಕಂತೆ ಧರ್ಮ ಬಿಡದ ರಾಜ ಎಂಬ ಪ್ರಸಿದ್ಧಿ ಹೊಂದಿದ್ದು ತನ್ನ ಆಳ್ವಿಕೆಯ ಇತರ ಕಪಿಗಳನ್ನು ತನ್ನ ಮಕ್ಕಳಂತೆಯೇ ನೋಡಿಕೊಳ್ಳುತ್ತಿತ್ತು. ಅನ್ಯಾಯ, ಅಕ್ರಮ ಎಲ್ಲಿ ನಡೆದರೂ ಹಾಗೆ ಮಾಡಿದವರನ್ನು ಕಠಿಣವಾಗಿ ದಂಡಿಸುತ್ತಿದ್ದಿತು. ಕಪಿಗಳೂ ಸಹ ರಾಜ ಧರ್ಮನ ಬಗ್ಗೆ ಭಯ ಭಕ್ತಿಗಳಿಂದ ಇದ್ದವು. ರಾಜ ಧರ್ಮನಿಗೆ ಬಹುಕಾಲ ಮಕ್ಕಳಾಗಲಿಲ್ಲ. ನಂತರ ಪೂರ್ವ ಜನ್ಮದ ಪುಣ್ಯದಿಂದಾಗಿ ಒಂದು ಗಂಡು ಮಗು ಆಯಿತು. ಆ ಮಗುವಿಗೆ ಸರ್ವಕೇತು ಎಂದು ಹೆಸರಿಟ್ಟರು. ಸರ್ವಕೇತು ಯುಕ್ತವಯಸ್ಸಿಗೆ ಬಂದಾಗ, ರಾಜ್ಯಪಟ್ಟಾಭಿಷೇಕ ಮಾಡಬೇಕೆಂದು ರಾಜಧರ್ಮ ಅಂದುಕೊಂಡ.

ಒಮ್ಮೆ ಕಂದಕಗಿರಿಯಿಂದ ಕೆಲವು ಕಪಿಗಳು ಬಂದವು. ಅವು ರಾಜಧರ್ಮನನ್ನು ನೋಡಿ "ರಾಜ ನಿಮ್ಮ ಪಾಲನೆಯಲ್ಲಿ ನಾವೆಲ್ಲ ಸುಖ ಶಾಂತಿಗಳಿಂದ ಇಷ್ಟು ದಿನವೂ ಇದ್ದೆವು. ಈಗ ಮಾತ್ರವೇ ಊಹಿಸದಂತಹ ಕಷ್ಟಗಳು ಎದುರಾಗುತ್ತಿವೆ" ಎಂದವು. ರಾಜಧರ್ಮನು ರಾಜದಂಡವನ್ನು ಹಿಡಿದು "ನನ್ನ ಪ್ರಿಯ ಮಕ್ಕಳೇ, ನಿಮಗೆ ಬಂದೊದಗಿದ ಕಷ್ಟ ಯಾವುದು? ನಿಮಗೆ ತೊಂದರೆ ನೀಡುವವರು ಯಾರೇ ಆಗಿರಲಿ ಅವರನ್ನು ಬಿಡುವುದಿಲ್ಲ, ಶಿಕ್ಷಿಸುತ್ತೇನೆ. ನನ್ನ ದೇಹದಲ್ಲಿ ಪ್ರಾಣವಿರುವವರೆಗೆ ನಿಮಗೆ ಅನ್ಯಾಯವಾಗಲು ಬಿಡುವುದಿಲ್ಲ. ಇದು ನನ್ನ ಪ್ರತಿಜ್ಞೆ" ಎಂದು ಹೂಂಕರಿಸಿದನು. ಆ ಮಾತುಗಳಿಂದ ಕಪಿಗಳಿಗೆ ಬಹಳ ಸಂತೋಷವಾಯಿತು. "ರಾಜಾ, ನಮ್ಮ ಕಂದಕಗಿರಿಯ ತಪ್ಪಲಿಗೆ ಪ್ರತಿದಿನವೂ ಸಂಜೆ ಒಂದು ಹೊಸ ಕಪಿ ಬರುತ್ತದೆ. ಅದು ದೊಡ್ಡ ವಂಶದ ಕಪಿಯೇ ಆಗಿರಬೇಕು. ನಮ್ಮನ್ನು ಹಿಂಸಿಸುತ್ತದೆ. ಹೆಣ್ಣು ಕಪಿಗಳನ್ನು ಅವಮಾನಗೊಳಿಸುತ್ತದೆ. ಅದನ್ನು ಎದುರಿಸುವುದು ನಮ್ಮಿಂದ ಆಗದ ಕೆಲಸ" ಎಂದವು.

"ನೀವು ಕಂದಕಗಿರಿಗೆ ಹಿಂದಿರುಗಿರಿ. ಕೂಡಲೇ ಶಾಂತಿ ಭದ್ರತೆಗಳ ಏರ್ಪಾಡುಗಳನ್ನು ನಾನು ಮಾಡುತ್ತೇನೆ'' ಎಂದು ರಾಜಧರ್ಮ ಕಪಿಗಳನ್ನೆಲ್ಲ ಹಿಂದಕ್ಕೆ ಕಳುಹಿಸಿದ.

ರಾಜಧರ್ಮ ಇಬ್ಬರು ಗೂಢಚಾರಿಗಳನ್ನು ಕರೆದು "ಕಂದಕಗಿರಿಯಲ್ಲಿ ನಡೆಯುತ್ತಿರುವ ಅಶಾಂತಿಗೆ ಕಾರಣವನ್ನು ತಿಳಿದುಕೊಂಡು ಬರುವಂತೆ'' ಹೇಳಿ ಕಳುಹಿಸಿದ. ಇಬ್ಬರು ಗೂಢಚಾರಿಗಳೂ ಕಂದಕಗಿರಿಯನ್ನು ಸೇರಿದರು. ಅಶಾಂತಿಗೆ ಕಾರಣ ತಿಳಿದುಕೊಂಡು ಬಂದು ರಾಜಧರ್ಮನಿಗೆ ತಿಳಿಸಿದರು. ಆ ವಿಷಯವನ್ನು ತಿಳಿದ ತಕ್ಷಣವೇ ರಾಜಧರ್ಮನ ಕಣ್ಣುಗಳು ಕೋಪದಿಂದ ಕೆಂಪಗಾದವು. ಗೂಢಚಾರಿಗಳನ್ನು ಕಳುಹಿಸಿಬಿಟ್ಟು ಬಲಶಾಲಿಗಳಾದ ಇಬ್ಬರು ಕಪಿವೀರರನ್ನು ಕರೆದು "ನೀವು ಈ ದಿನವೇ ಸಂಜೆಯ ಹೊತ್ತಿಗೆ ಕಂದಕಗಿರಿಯನ್ನು ತಲುಪಿ, ಅಲ್ಲಿ ಅಶಾಂತಿಯನ್ನು ಮಾಡುತ್ತಿರುವ ಕಪಿಯನ್ನು ಕೊಂದು ಹಾಕಿರಿ. ಆದರೆ ಆ ಕಪಿಯ ಮುಖವನ್ನು ನೀವು ನೋಡಬಾರದು. ಹಿಂದಿನಿಂದಲೇ ನಾನು ನೀಡುವ ಬಾಣಗಳಿಂದ ಅದನ್ನು ಕೊಲ್ಲಬೇಕು. ಇದು ನನ್ನ ಆಜ್ಞೆ'' ಎಂದು ಹೇಳಿ ಬಾಣಗಳನ್ನು ಕೊಟ್ಟನು.

## ರಾಜಧರ್ಮ

ಬಲಶಾಲಿಗಳಾದ ಆ ಕಪಿ ವೀರರಿಬ್ಬರೂ ಬಾಣಗಳೊಂದಿಗೆ ಕತ್ತಲಾಗುವ ವೇಳೆಗೆ ಕಂದಕಗಿರಿಯನ್ನು ತಲುಪಿದರು. ಅಲ್ಲಿ ಎರಡುದೊಡ್ಡ ಮರಗಳನ್ನೇರಿ ಕಾದು ಕುಳಿತರು. ಅಶಾಂತಿಯನ್ನು ಉಂಟು ಮಾಡುವ ಕಪಿ ಮರದಿಂದ ಮರಕ್ಕೆ ಹಾರುತ್ತ ಹೋಗುತ್ತಿದ್ದಿತು. ಇಬ್ಬರು ಕಪಿವೀರರೂ ಬಿಟ್ಟು ಬಾಣಗಳು ಅದರ ಬೆನ್ನಿನಲ್ಲಿ ನೆಟ್ಟುಕೊಂಡವು. ರಕ್ತ ತುಂಬಿಕೊಂಡು ಬಿದ್ದ ಆ ಕಪಿಯನ್ನು ನೋಡಿದ ಕೂಡಲೇ ಅವರಿಗೆ ಕಣ್ಣು ತುಂಬಿಕೊಂಡವು. ಧೈರ್ಯ ತಂದು ಕೊಂಡು ಆ ಕಪಿಯನ್ನು ಎತ್ತಿಕೊಂಡು ರಾಜ ಧರ್ಮನ ಬಳಿಗೆ ಬಂದವು "ಮಹಾರಾಜಾ ನಮ್ಮನ್ನು ಕ್ಷಮಿಸು. ನಾವು ಕಂದಕಗಿರಿಯನ್ನು ಸೇರಿ ಹೊಡೆದದ್ದು ಸರ್ವಕೇತುವನ್ನು. ನಾವು ತಿಳಿಯದೆ ಅಪರಾಧ ಮಾಡಿದ್ದೇವೆ. ನಮಗೆ ತಕ್ಕ ಶಿಕ್ಷೆಯನ್ನು ವಿಧಿಸು" ಎಂದು ಇಬ್ಬರೂ ತಲೆಬಾಗಿ ನಿಂತರು.

ರಾಜಧರ್ಮನು ಅವರನ್ನು ಸಮಾಧಾನ ಪಡಿಸಿ "ಮಕ್ಕಳೇ ನನ್ನ ರಾಜ್ಯದಲ್ಲಿ ಯಾರೇ ತಪ್ಪು ಮಾಡಲಿ, ಶಿಕ್ಷೆ ವಿಧಿಸದೆ ಬಿಡುವುದಿಲ್ಲ. ಕಂದಕಗಿರಿಯಲ್ಲಿ ಅಶಾಂತಿಯನ್ನು ಉಂಟುಮಾಡಿದ್ದು ಸರ್ವಕೇತುವೆಂಬುದು ನನಗೆ ಮೊದಲೇ ತಿಳಿದಿತ್ತು. ಅಕ್ರಮ ಅನ್ಯಾಯ ಅಶಾಂತಿಗೆ ಮೂಲಕಾರಣ ಸರ್ವಕೇತುವೇ ಎಂಬುದಾಗಿ ಗೂಢಚಾರಿಗಳು ತಿಳಿಸಿದ್ದರು. ತಪ್ಪು ಮಾಡಿದವನು ಯಾರೇ ಆದರೂ ದಂಡನೆಯನ್ನು ಅನುಭವಿಸಲೇ ಬೇಕು. ಅದರಲ್ಲಿಯೂ ಸ್ತ್ರೀಯರನ್ನು ಅವಮಾನಿಸುತ್ತ, ಧನ ಮಾನಹಾನಿ ಮಾಡುವವನು ಯುವರಾಜನೇ ಆದರೂ ತಕ್ಕ ಶಿಕ್ಷೆಯನ್ನು ಅನುಭವಿಸಬೇಕಾದದ್ದೇ. ನನ್ನ ಮಗನಿಗಿಂತ ನನಗೆ ಪ್ರಜೆಗಳೇ ಮುಖ್ಯ." ಎಂದು ಗದ್ಗದ ಕಂಠದಿಂದ ಹೇಳಿದನು.

ಆಗ ಆಕಾಶವಾಣಿಯೊಂದು ಹೀಗೆ ನುಡಿಯಿತು; "ರಾಜಧರ್ಮಾ; ನೀನು ಧರ್ಮವನ್ನು ಬಿಡದಿರುವ ರಾಜ. ಹಾಗೆಂದೇ ನಿನಗೆ ಈ ಪರೀಕ್ಷೆ. ಯುವರಾಜ ಸರ್ವಕೇತು ನಿಜವಾಗಿ ಸತ್ತಿಲ್ಲ, ಪಶ್ಚಾತ್ತಾಪದಿಂದ ಪ್ರಜ್ಞೆ ತಪ್ಪಿದ್ದಾನಷ್ಟೆ. ಕೂಡಲೇ ಚಿಕಿತ್ಸೆ ಮಾಡಿಸಿ ಪಟ್ಟಾಭಿಷೇಕ ಮಾಡು." ಆಕಾಶವಾಣಿಯನ್ನು ಕೇಳಿ ರಾಜಧರ್ಮನೂ ಅವನ ಮಂತ್ರಿಗಳೂ ಸಂತೋಷ ಪಟ್ಟರು. ಸರ್ವಕೇತುವಿಗೆ ಔಷಧಿ ನೀಡಿ ಪಟ್ಟಾಭಿಷೇಕ ಮಾಡಿದರು. ಆತನೂ ತಂದೆಯಂತೆಯೇ ಧರ್ಮವನ್ನು ಬಿಡದೆ ರಾಜ್ಯಭಾರಮಾಡಿ ಕೀರ್ತಿ ಪಡೆದನು.

(–ತೆಲುಗಿನಿಂದ)

# ಗೃಹಲಕ್ಷ್ಮಿ



೧

ಹೆಣ್ಣಿನಂತೆ ಲಕ್ಷಣವಿರಬೇಕು. ಬಾಳೆ
ಹಣ್ಣಿನ ರುಚಿಯಂತೆ ಗುಣವಿರಬೇಕು ॥ ಪಲ್ಲವಿ ॥

ಒಡಲನೆ ಕಟ್ಟಿ ಒಬ್ಬರಿಗಿಡಬೇಕು
ಸುಡುಗಾಡಿಗಳ ಮಾತು ನೀ ಮರೆಯಲು ಬೇಕು
ನೋಡಿದರೆ ನೋಡಲಿಲ್ಲೆಂಬೋದಿರಬೇಕು
ನಡತೆ ಗುಣದಲಿ ಪಾರ್ವತಿ ಸಮವಿರಬೇಕು ॥ 1 ॥

ಗತಿಯು ತನಗೆ ಪ್ರಾಣಪತಿಯೆನಬೇಕು
ಪ್ರತಿ ಅರುಂಧತಿಯೀಕೆಯೆನಿಸಬೇಕು
ಯತಿ ಗುರು ಹಿರಿಯರಿಗೆರಗಿ ಸುಖಿಸಬೇಕು
ಅತಿಶಯ ಸಮುದ್ರ ಗಾಂಭೀರ್ಯವಿರಬೇಕು ॥ 2 ॥

ಪರತತ್ತ್ವ ಭಾವವ ತಿಳಿದಿರಬೇಕು
ಹರಿ ಪರದೇವತೆಯಧೀನವಿರಬೇಕು
ವರಲಕ್ಷ್ಮಿಯಂದದಿ ದಯವಿರಬೇಕು
ಪುರಂದರ ವಿಠಲ ಮೆಚ್ಚಬೇಕು ॥ 3 ॥

೨

ತಂಗಿಗ್ಹೇಳಿದ ಕೃಷ್ಣ ಚಂದದಲಿ ಬುದ್ಧಿ ॥ ಪಲ್ಲವಿ ॥
ಅತ್ತೆ ಮನೆಯಲ್ಲಿ ಇರುವಂತೆ ಸುದ್ದಿ ॥ ಅ. ಪಲ್ಲವಿ ॥

ಯಾರೇನು ಅಂದರೂ ಮೊರೆಯನು ತಿರುವದಿರು
ಮೋರೆ ಮೇಲೆ ಕೈಯೆತ್ತಿ ಬಲ್ಲಳೆಂದೆಣಿಸಿ
ವಾರಿಗೆಯರ ಕೂಡಿ ನೀರ ತರುವಾಗ
ಓರೆಗಣ್ಣಿನಲಿ ನೋಟ ನೋಡದಿರು ಕಂಡ್ಯ ॥ 1 ॥

ಪರರ ಒಡವೆಯು ಕಂಡು ದುರುಳ ಮಾತಾಡದಿರು
ನೆರೆ ಹೊರೆಯು ಜನಗಳಿಗೆ ಶಿರಬಾಗಿ ನಡೆ ನೀ
ಪರರ ಮಾತುಗಳಿಂದ ದುರುಳಳೆಂದೆನಿಸದಿರು
ನೆರೆ ಹೊರೆಯು ಕಂಡು ನೀ ಬದುಕ ಮಾಡಮ್ಮ ॥ 2 ॥

ಭಂಗಾರಕಾಗಿ ನೀನಂಗಡಿಗೆ ಹೋಗದಿರು
ಅಂಗನೇರಿಗೆ ಮಾನ ಭಂಗಾಗಿ ನಡೆಯೆ
ಅಂಗನೇರಿಗೆ ನಿನ್ನಂತರಂಗವ ನುಡಿಯದಿರು
ಭಂಗಾರ ವಸ್ತ್ರಗಳ ಮುಚ್ಚಿಕೊಳ್ಳಮ್ಮ ॥ 3 ॥

ಹಾಕಿದ್ದು ನೀನುಂಡು ಬೇಕೆಂದು ಬೇಡದಿರು
ಸಾಕೆಂದು ನಾಚಿಕೆಯ ಹಿಡಿಯೆ
ನಾಕುಮಂದಿಯೊಡನೆ ಕೊಕ್ಕೆ ಮಾತಾಡದಿರು
ಲೋಕದಲಿವಳೊಬ್ಬ ಮಾಕಿಯೆಂದೆನಿಸು ॥ 4 ॥

ಇಷ್ಟರು ಅಂದರು ನಿಷ್ಠುರವನಾಡದಿರು
ಗಟ್ಟಿ ಮಾಡಮ್ಮ ನಿನ್ನ ಮನಸು
ಸೃಷ್ಟಿಯೊಳಗೆ ನಮ್ಮ ಪುರಂದರ ವಿಠಲನ್ನ
ಶ್ರೇಷ್ಠ ಕೃಷ್ಣನ ತಂಗಿಯೆಂದೆನಿಸಿ ॥ 5 ॥

# ಆದರ್ಶ ಸ್ತ್ರೀ

೩

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ ಮಗಳೆ ಮನ
ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ॥ ಪಲ್ಲವಿ ॥

ಅತ್ತೆ ಮಾವಗಂಜಿಕೊಂಡು ನಡೆಯಬೇಕಮ್ಮ
ಚಿತ್ತದೊಲ್ಲಭನಕ್ಕರೆಯನ್ನು ಪಡೆಯಬೇಕಮ್ಮ
ಹೊತ್ತು ಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ ಮಗಳೆ
ಹತ್ತು ಮಂದಿ ಒಪ್ಪುವ ಹಾಗೆ ನುಡಿಯ ಬೇಕಮ್ಮ ॥ 1 ॥

ಕೊಟ್ಟು ಕೊಂಬುವ ನೆಂಟರೊಡನೆ ದ್ವೇಷ ಬೇಡಮ್ಮ
ಆಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ॥ 2 ॥

ನೆರೆ ಹೊರೆಯರಿಗೆ ನ್ಯಾಯ ಹೇಳಬೇಡಮ್ಮ
ಗರುವ ಕೋಪ ಮತ್ಸರ ಮಾಡಬೇಡಮ್ಮ
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ
ಗುರು ಪುರಂದರ ವಿಠಲನ ಸ್ಮರಣೆ ಮರೆಯಬೇಡಮ್ಮ ॥ 3 ॥

— ಪುರಂದರದಾಸರು

# ರಾಮಾಯಣ ಸಮಾಜ - ಸಂಸ್ಕೃತಿ

ವಾಲ್ಮೀಕಿ ರಾಮಾಯಣವು ಆದಿ ಕಾವ್ಯವಾಗಿರುವಂತೆಯೇ ಆದರ್ಶ ಕಾವ್ಯವೂ ಹೌದು. ಆದಿ ಕವಿಗಳು ಇದನ್ನು ಲೋಕಕಲ್ಯಾಣಕ್ಕಾಗಿ ರಚಿಸಿದರು. ಪ್ರಭುಸಂಮಿತ, ಮಿತ್ರಸಂಮಿತ ಮತ್ತು ಕಾಂತಾಸಂಮಿತಗಳ ಮೂಲಕ ವೇದಗಳಲ್ಲಿ ಉಕ್ತವಾಗಿರುವ ಸತ್ಯಂವದ, ಧರ್ಮಂ ಚರ, ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಮಾವಿದ್ವಿಷಾವಹೈ – ಎಂಬಿವೇ ಮೊದಲಾದ ನಿತ್ಯಸತ್ಯಗಳಾದ ಮೂಲಸೂತ್ರಗಳನ್ನು ತಾವು ಕಂಡು ಅನುಭವಿಸಿದ ಮತ್ತು ತಾವೇ ಪ್ರತ್ಯಕ್ಷ ಸಂಬಂಧ ಹೊಂದಿದ್ದ ಸಮಾಜ ಮತ್ತು ವ್ಯಕ್ತಿಗಳ ವಿಸ್ತಾರವಾದ ಚಿತ್ರಗಳಿಂದ ವಿಶದಪಡಿಸಿದ್ದಾರೆ. ಅಲ್ಲಿ ವರ್ಣಿತವಾಗಿರುವ ಭಾಗಗಳು ಕೇವಲ ಕಾವ್ಯಸತ್ಯವಾಗಿರದೆ ಮುಂದಿನ ಪೀಳಿಗೆಗೆ ದಾರಿದೀಪಗಳಾಗಿವೆ.

ಬ್ರಹ್ಮದೇವರು ವಾಲ್ಮೀಕಿ ಋಷಿಗಳನ್ನು ಕುರಿತು "ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ । ತಾವತ್ ರಾಮಾಯಣ ಕಥಾ ಲೋಕೇಷು ಪ್ರಚರಿಷ್ಯತಿ ॥" ಎಂದು ಆಶ್ವಾಸನೆಮಾಡಿದರು. ಅದರಂತೆಯೇ ವಾಲ್ಮೀಕಿ ಋಷಿಗಳು ತಮ್ಮ ಕಾವ್ಯದಲ್ಲಿ ಅನಂತಕಾಲಕ್ಕೆ ಸುಖದಾಯಕವಾದ ಸಮಸ್ತ ಕಾಲಕ್ಕೂ ಅನ್ವಯಿಸಬಹುದಾದ ಸಮಾಜ–ಜೀವನವನ್ನು ಆದರ್ಶವ್ಯಕ್ತಿಗಳನ್ನೂ ಚಿತ್ರಿಸಿದ್ದಾರೆ. ಅದಕ್ಕಾಗಿಯೇ ಅವರು ರಾಮಾಯಣದಲ್ಲಿ ಆದರ್ಶಪಿತಾ ಆದರ್ಶಪುತ್ರ ಆದರ್ಶಮಾತಾ ಆದರ್ಶಭ್ರಾತಾ ಆದರ್ಶಮಿತ್ರ ಆದರ್ಶಪತ್ನೀ ಆದರ್ಶದೂತಾ – ಮೊದಲಾದ ಅನೇಕ ಆದರ್ಶಗಳನ್ನು ವಾಚಕರ ಮುಂದಿಟ್ಟಿದ್ದಾರೆ. 'ಲೋಕಾಸ್ಸಮಸ್ತಾಃ ಸುಖಿನೋಭವಂತು, ಸರ್ವೇ ಜನಾಃ ಸುಖಿನೋಭವಂತು' ಎಂಬುದು ಅವರ ಪರಮಧ್ಯೇಯ. ಆದುದರಿಂದಲೇ ರಾಮಾಯಣದಲ್ಲಿ ಯಾವಕಾಲಕ್ಕಾದರೂ ಜಘನ್ಯವಾದ ಗುಣಕೀರ್ತನೆಗಳೂ ಸನ್ನಿವೇಶಗಳೂ ಕಂಡುಬರುವುದಿಲ್ಲ.

ಎಲ್ಲಾ ಆದರ್ಶಗಳಿಗೂ ಮೂಲಭೂತವಾದುದು ಆದರ್ಶಜೀವನ. ಅದನ್ನು ಅವರು ಕಣ್ಣಾರೆ ಕಂಡು ಅನುಭವಿಸಿದ್ದರು. ಆದ್ದರಿಂದಲೇ ಅವರು ಅದನ್ನು ಬಹು ನವಿರಾಗಿ ವಿವರವಾಗಿ ಚಿತ್ರಿಸಿದ್ದಾರೆ. ಒಂದು ದೃಷ್ಟಿಯಿಂದ ಅಖಂಡರಾಮಾಯಣವನ್ನು ಆ ಕಾಲದ ಸಮಾಜ ಜೀವನದ ಕೈಪಿಡಿಯೆಂದು ಹೇಳಬಹುದು.

ತಮ್ಮ ಚಿತ್ರಣದಲ್ಲಿ ವಾಲ್ಮೀಕಿ ಋಷಿಗಳು ತಮ್ಮ ಕಾಲದ ಯಾವ ಸಮಾಜವನ್ನೂ ಮರೆತಿಲ್ಲ. ಕೋಸಲದೇಶದ ಆರ್ಯ ಸಮಾಜ, ವನವಾಸಿಗಳಾಗ ತಾಪಸರ ನಿಯಂತ್ರಿತ ಸಮಾಜ, ಗುಹಾವಾಸಿಗಳಾದ ಕಿಷ್ಕಿಂಧೆಯ ವಾನರ ಸಮಾಜ, ಲೋಕ – ಕಂಟಕರಾಗಿದ್ದ ಲಂಕೆಯ ರಾಕ್ಷಸಸಮಾಜ – ಎಲ್ಲವೂ ಪೂರ್ಣವಾಗಿ ಅಲ್ಲಿ ಉಲ್ಲೇಖವಾಗಿವೆ. ಒಂದೊಂದರ ಹಿನ್ನೆಲೆಯಲ್ಲಿ ಆ ಸಮಾಜಕ್ಕೆ ಸಂಬಂಧಪಟ್ಟ ನಗರ, ಅವುಗಳ ನಿರ್ಮಾಣ, ಅಲಂಕಾರ, ರಾಜಪ್ರಜೆಗಳ ಪರಸ್ಪರ ಸಂಬಂಧ, ಅವರ ಆಶೆ ಆತಂಕಗಳು, ಧ್ಯೇಯ ಧೋರಣೆಗಳು, ಗುಣದೋಷಗಳು, ಉಡಿಗೆ ತೊಡಿಗೆಗಳು, ಆಹಾರವಿಹಾರಗಳು, ಆಚಾರ ವ್ಯವಹಾರಗಳು, ಸಂಪತ್ ಸೌಲಭ್ಯಗಳು, ಬಲಾಬಲಗಳು, ಕಲಾಕೌಶಲ್ಯಗಳು, ಯುದ್ಧ ಚಮತ್ಕಾರಗಳು – ಇವುಗಳ ಶ್ರೀಮಂತ ಚಿತ್ರಣವನ್ನು ಅಲ್ಲಿ ಕಾಣಬಹುದು. ಅವುಗಳೆಲ್ಲವನ್ನೂ ಕುರಿತು ವರ್ಣಿಸಲು ಕೆಲವು ಸಂಪುಟಗಳೇ ಬೇಕಾದೀತು. ಇಲ್ಲಿ ಅವುಗಳಲ್ಲಿ ಕೆಲವುದರ ಮೂಲರೇಖೆಗಳನ್ನು ಮಾತ್ರ ಪರಿಚಯ ಮಾಡಿಕೊಳ್ಳಬಹುದು.

ರಾಮಾಯಣ ಕಾಲದ ಸಮಾಜದ ಪ್ರಧಾನ ಪ್ರತೀಕ ನಾಯಕನಾದ ಶ್ರೀರಾಮ. ನಾರದೋಕ್ತಿಯಂತೆ ಅವನು ಮಾನವ ಮಾತ್ರ; ಮನುಷ್ಯ ಸಾಮಾನ್ಯವಾದ ಗುಣದೋಷಗಳಿಂದಲೂ ದೌರ್ಬಲ್ಯಗಳಿಂದಲೂ ಕೂಡಿದ್ದರೂ, ಆತನು ಮನುಷ್ಯತ್ವದಿಂದ ದೇವತ್ವಕ್ಕೆ ಏರಿದ ಆದರ್ಶಮಾನವ. ಧರ್ಮಜ್ಞ, ಸತ್ಯವಂತ, ಶೀಲವಂತ, ಸೌಮ್ಯಸ್ವಭಾವದವನು, ಅಚಂಚಲವಾದ ಮನಸ್ಸನ್ನುಳ್ಳವನು. ಹಿರಿಯರಲ್ಲಿ ಭಕ್ತಿ ಗೌರವವುಳ್ಳವನು. ಪ್ರಿಯವಾದಿ, ಸತ್ಯವ್ರತ, ಪಿತೃವಾಕ್ಯ ಪರಿಪಾಲಕ, ಆದರ್ಶಪತಿ, ಆದರ್ಶಮಿತ್ರ, ಶರಣಾಗತವತ್ಸಲ, ಧರ್ಮದ ಪ್ರತೀಕ, "ರಾಮೋ ವಿಗ್ರಹವಾನ್ ಧರ್ಮಃ". ಆದರೂ ಮಾನವನ ದೌರ್ಬಲ್ಯವುಳ್ಳವನು. ತಾನು ಮನುಷ್ಯನೆಂದೇ ತಿಳಿದಿದ್ದವನು. ಸೀತೆಯ ವಿರಹದಲ್ಲಿಯೂ ಲಕ್ಷ್ಮಣನ ವಿಯೋಗದಲ್ಲಿಯೂ ಅವನು ಪಟ್ಟ ಕೋಟಲೆ ಅವರ್ಣನೀಯ. ಆದರೂ "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾನಿಚ" ಎಂಬಂತೆ ಕಠೋರ ಮತ್ತು ಮೃದುಗುಣಗಳನ್ನು ಉಳ್ಳವನು. ಅವನ ಕರ್ತವ್ಯದೃಷ್ಟಿ ಅತ್ಯಮೋಘವಾದುದು. ಇಂತಹವನು ಯಾವ ಕಾಲಕ್ಕಾದರೂ ಆದರ್ಶವಾಗಬಲ್ಲ.

ಅವನ ಪರಿವಾರದವರೆಲ್ಲ ಅಂತಹವರೇ. ದಶರಥನು ಕೋಸಲ ದೇಶದ ರಾಜನಾಗಿದ್ದವನು. ಅಯೋಧ್ಯೆಯು ಅದರ ರಾಜಧಾನಿ. ಅದು ಸರಯೂನದಿಯ ದಡದಲ್ಲಿ ಬಹು ವಿಸ್ತಾರವಾಗಿದ್ದು ದೊಡ್ಡ ರಸ್ತೆಗಳಿಂದಲೂ, ಗಗನಗಾಮಿಯಾದ ಪ್ರಾಸಾದಗಳಿಂದಲೂ ತುಂಬಿರುತ್ತಿತ್ತು. ಬೀದಿಗಳೆಲ್ಲ ಶುಚಿಯಾಗಿಯೂ ಕೋಟೆಗಳೆಲ್ಲ ದಿಡ್ಡಿಬಾಗಿಲುಗಳಿಂದ ಕೂಡಿದವೂ ಆಗಿದ್ದವು. ಅಲ್ಲಿಯ ಸಸ್ಯಸಮೃದ್ಧಿ ಬಹು ಆಕರ್ಷಕವಾಗಿದ್ದಿತು. ಅಲ್ಲಿಯ ಅಂಗಡಿಗಳಲ್ಲಿ ಧನಧಾನ್ಯಗಳೇ ಅಲ್ಲದೆ ಆಯುಧಗಳೂ ಯಂತ್ರಗಳೂ ಇದ್ದವು. ನಾನಾ ಕುಶಲಕಲೆಗಳಲ್ಲಿ ನಿಪುಣರಾದ ಶಿಲ್ಪಿಗಳು ಅಲ್ಲಿ ವಾಸಮಾಡುತ್ತಿದ್ದರು. ಸ್ತ್ರೀಯರ ನೃತ್ಯಶಾಲೆ ಅಲ್ಲಿ ಕಂಗೊಳಿಸುತ್ತಿದ್ದವು. ಜಲಧಾನ್ಯಸಮೃದ್ಧಿಗೆ ಅಲ್ಲೇನೂ ಕಡಿಮೆಯಿರಲಿಲ್ಲ. ರೋಗಾದ್ಯುಪದ್ರವಗಳೂ, ಕಳ್ಳಕಾಕರ ಭೀತಿಯೂ ಎಂದೂ ಇದ್ದಿಲ್ಲ. ವರ್ಣಾಶ್ರಮಗಳ ಧರ್ಮಪಾಲನೆ ತೃಪ್ತಿಕರವಾಗಿತ್ತು. ಪ್ರತಿವರ್ಣದವರೂ ತಮ್ಮ ವರ್ಣಧರ್ಮದಲ್ಲಿ ನಿರತರಾಗಿರುತ್ತಿದ್ದರು. ಎಲ್ಲ ವರ್ಣದವರಿಗೂ ಸಮಾನವಾದ ಗೌರವ ಸಲ್ಲುತ್ತಿತ್ತು.

ಅಲ್ಲಿಯ ರಾಜನಾದ ದಶರಥನು ವಿದ್ವಾಂಸ. ದೀರ್ಘದರ್ಶಿ, ತೇಜಸ್ವಿ, ಪ್ರಜಾನುರಾಗಿ, ಅತಿರಥ. ಅವನು ಯಾರನ್ನೂ ದ್ವೇಷಿಸುತ್ತಿರಲಿಲ್ಲ, ಯಾರೂ ಅವನನ್ನು ದ್ವೇಷಿಸುತ್ತಿರಲಿಲ್ಲ. ಧರ್ಮಶೀಲ, ರಾಜರ್ಷಿ, ಹತ್ತು ದಿಕ್ಕುಗಳಲ್ಲಿಯೂ ತಡೆಯಿಲ್ಲದ ರಥ ಸಂಚಾರವುಳ್ಳವನು. ಮಿತ್ರ ಸಂಗ್ರಹದಲ್ಲಿಯೂ ಶತ್ರುನಿಗ್ರಹದಲ್ಲಿಯೂ ನಿಪುಣ.

ನಗರದಲ್ಲಿದ್ದ ಪ್ರಜೆಗಳು ಧರ್ಮಿಷ್ಠರೂ ಸತ್ಯವಂತರೂ ಸಂಪತ್ ಸಮೃದ್ಧಿಯಿಂದ ಕೂಡಿದವರೂ ನಿತ್ಯತೃಪ್ತರೂ ಆಗಿದ್ದರು. ಕಾಮುಕನಾಗಲೀ ಜಿಪುಣನಾಗಲಿ ನಾಸ್ತಿಕನಾಗಲೀ ಅಲ್ಲಿ ಇರಲಿಲ್ಲ, ಸ್ತ್ರೀಪುರುಷರೆಲ್ಲರೂ ಜಿತೇಂದ್ರಿಯರೂ ಪರಿಶುದ್ಧ ಹೃದಯರೂ ಆಗಿದ್ದರು. ಬ್ರಾಹ್ಮಣರು

ಡಾ॥ ಎನ್. ಅನಂತರಂಗಾಚಾರ್

ಷಟ್ಕರ್ಮನಿರತರಾಗಿದ್ದರು. ರಾಜಭಕ್ತಿಯಿಲ್ಲದವರೂದುರಾಚಾರಿಗಳಾದವರೂ ಅಲ್ಲಿ ಕಂಡು ಬರುತ್ತಿರಲಿಲ್ಲ.

ದಶರಥ ಮಹಾರಾಜನಿಗೆ ಗುಣಶಾಲಿಗಳೂ ರಾಜಕಾರ್ಯದಕ್ಷರೂ ಆದ ಎಂಟುಮಂದಿ ಮಂತ್ರಿಗಳೂ, ಇಬ್ಬರು ಪುರೋಹಿತರೂ ಇದ್ದರು. ಅವರು ರಾಜನಿಗೆ ಪ್ರಿಯವೂ ಹಿತಕರವೂ ಆದ ಕಾರ್ಯದಲ್ಲಿಯೇ ನಿರತರಾಗಿದ್ದರು. ಅವರೆಲ್ಲರೂ ವಿದ್ಯಾವಿನಯಸಂಪನ್ನರೂ ಜನಾಪವಾದಕ್ಕೆ ಹೆದರುವವರೂ ಜಿತೇಂದ್ರಿಯರೂ ಅನ್ಯೋನ್ಯಪ್ರೀತಿಯುಳ್ಳವರೂ ನೀತಿವಂತರೂ ವಿದ್ವಾಂಸರೂ ತೇಜಶ್ಶಾಲಿಗಳೂ ಶಾಸ್ತ್ರಜ್ಞರೂ ದೃಢನಿಶ್ಚಯವುಳ್ಳವರೂ ಕ್ಷಮಾಶೀಲರೂ ಪ್ರಜೆಗಳೊಡನೆ ಯಾವಾಗಲೂ ನಗುತ್ತಾ ಮಾತನಾಡುವವರೂ ಆಗಿದ್ದರು. ಕಾಮಕ್ರೋಧಗಳಿಗಾಗಲೀ ಸ್ವಾರ್ಥಕ್ಕಾಗಲೀ ಎಂದೂ ಸುಳ್ಳುಹೇಳಿದವರಲ್ಲ. ಸ್ವರಾಷ್ಟ್ರದಲ್ಲಾಗಲೀ ಪರರಾಷ್ಟ್ರದಲ್ಲಾಗಲೀ ಅವರಿಗೆ ತಿಳಿಯದ ವಿಷಯಗಳೇ ಇರಲಿಲ್ಲ. ತಪ್ಪಿತಸ್ಥನಾದ ಮಗನನ್ನಾದರೂ ದಂಡಿಸದೇ ಬಿಡುತ್ತಿರಲಿಲ್ಲ. ಹಾಗೆಯೇ ನಿರಪರಾಧಿಗಳನ್ನು ಎಂದಿಗೂ ಹಿಂಸಿಸುತ್ತಿರಲಿಲ್ಲ. ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸುತ್ತಿದ್ದರು. ಪರಸ್ತ್ರೀಯರನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಸತ್ಪ್ರಜೆಗಳನ್ನು ರಕ್ಷಿಸುವುದೇ ಅವರ ಪರಮಧ್ಯೇಯವಾಗಿತ್ತು.

ಅಯೋಧ್ಯೆಯ ಪೌರರನ್ನು ಕುರಿತು ರಾಮನು ಕಾಡಿನಲ್ಲಿ ಭರತನು ತನ್ನನ್ನು ಸಂದರ್ಶಿಸಿದಾಗ ಹೀಗೆ ಹೇಳುವನು: "ಭರತ ನಮ್ಮ ಪ್ರಜೆಗಳು ನೆಮ್ಮದಿಯಲ್ಲಿದ್ದಾರೆ. ನಮ್ಮ ದೇಶವು ದೇವಸ್ಥಾನಗಳಿಂದಲೂ ಅರವಟ್ಟಿಗೆಗಳಿಂದಲೂ ಕೊಳಗಳಿಂದಲೂ ಕೂಡಿವೆ. ಸ್ತ್ರೀಪುರುಷರೆಲ್ಲರೂ ಉಲ್ಲಾಸದಿಂದಿದ್ದಾರೆ. ಸರ್ವ ಕಾಲದಲ್ಲಿಯೂ ಸಾಮಾಜಿಕ ಉತ್ಸವಗಳು ನಡೆಯುತ್ತಲೇ ಇರುತ್ತವೆ. ಸಮಸ್ತ ಪ್ರದೇಶದಲ್ಲಿಯೂ ಕೃಷಿಯು ಚೆನ್ನಾಗಿ ನಡೆಯುತ್ತಿದೆ. ದನಕರುಗಳು ಸಮೃದ್ಧವಾಗಿವೆ. ಯಾವ ಹಿಂಸಾಕೃತ್ಯವೂ ನಡೆಯುತ್ತಿಲ್ಲ. ಕೋಸಲ ದೇಶವು ಮಳೆಯನ್ನು ಅವಲಂಬಿಸಿಲ್ಲ. ನದಿಯ ನೀರಿನಿಂದಲೇ ಕೃಷಿಯ ಕಾರ್ಯಗಳು ನಡೆಯುತ್ತಿದೆ. ಕ್ರೂರ ಪ್ರಾಣಿಗಳ ಕಾಟವಿಲ್ಲ. ಯಾವ ಈತಿ ಬಾಧೆಯೂ ಇಲ್ಲ. ನಾನಾ ಲೋಹದ ಗಣಿಗಳು ಹೇರಳವಾಗಿವೆ. ಪಾಪಬುದ್ಧಿಯ ಜನರೇ ನಮ್ಮಲ್ಲಿ ಇಲ್ಲ. ವಾಣಿಜ್ಯದಿಂದ ದೇಶವು ಅಭಿವೃದ್ಧಿಯಾಗುತ್ತಿದೆ. ವೈದ್ಯ ವೃತ್ತಿಯಲ್ಲಿರುವವರು ತಮ್ಮ ಕಾರ್ಯವನ್ನು ಸರಿಯಾಗಿ ನಡೆಸುತ್ತಿದ್ದಾರೆ. ಇವರೆಲ್ಲರನ್ನೂ ನೀನು ಸರಿಯಾಗಿ ಪಾಲಿಸುತ್ತಿದ್ದೀಯಾ?"

ವಾಲ್ಮೀಕಿ ಋಷಿಗಳು ಸಮಾಜದಲ್ಲಿರುವ ಎಲ್ಲ ಪಂಗಡದವರನ್ನೂ ವಿವರವಾಗಿ ತಿಳಿಸಿ ಅವರ ಕಾರ್ಯವೈಭವವನ್ನು ವಿಶದಪಡಿಸಿದ್ದಾರೆ. ಭರತನು ರಾಮನನ್ನು ಕಾಡಿನಿಂದ ಕರೆತರಲು ಪ್ರಯಾಣ ಮಾಡಿದ ಸಂದರ್ಭದಲ್ಲಿ ಮಾರ್ಗರಚನೆ ಮಾಡಿದ ವೈಭವದ ರೀತಿ ಇದು: ಭರತನ ಜೊತೆಯಲ್ಲಿ ಯಂತ್ರ ತಜ್ಞರು, ಬಡಗಿಗಳು, ರಸ್ತೆಯ ಶಿಲ್ಪದಲ್ಲಿ ಕುಶಲರಾದವರು, ಮರವನ್ನು ಕಡಿಯುವವರೂ ಹೊರಟರು. ಅವರೊಡನೆ ಬಾವಿ ತೋಡುವವರೂ ಸುಣ್ಣ ಬಳಿಯುವವರೂ ಬಿದಿರಿನ ಕೆಲಸ ಮಾಡುವವರೂ ಮೇಲ್ವಿಚಾರಕರೂ ಕೂಡಿಕೊಂಡರು. ಅವರು ದಾರಿಗೆ ಅಡ್ಡಲಾಗಿದ್ದ ಕೊಂಬೆಯನ್ನೂ ಪೊದೆಗಳನ್ನೂ ಕತ್ತರಿಸಿದರು- ಮುಳ್ಳುಗಳನ್ನು ಕಿತ್ತರು. ಬಂಡೆಗಳನ್ನು ಒತ್ತರಿಸಿದರು. ಮರಗಳಿಲ್ಲದ ಸ್ಥಳಗಳಲ್ಲಿ ನೆರಳಿಗಾಗಿ ಮರಗಳನ್ನು ನೆಟ್ಟರು. ಹುಲ್ಲಿನ ಪೊದೆಗಳನ್ನು ಕಿತ್ತೆಸೆದರು. ದಾರಿಯಲ್ಲಿದ್ದ ಗುಂಡಿಗಳನ್ನೂ ಕೊರಕಲುಗಳನ್ನೂ ಮುಚ್ಚಿದರು. ನೆಲವನ್ನು ಸಮಮಾಡಿದರು. ಸೇತುವೆಗಳನ್ನು ಕಟ್ಟಿದರು. ಚರಂಡಿಗಳನ್ನು ತೋಡಿದರು. ಸಣ್ಣ ಹಳ್ಳಗಳಿಗೆ ಅಣೆಕಟ್ಟುಗಳನ್ನು ಕಟ್ಟಿದರು. ನಿರ್ಜಲ ಪ್ರದೇಶದಲ್ಲಿ ಬಾವಿಗಳನ್ನು ತೋಡಿದರು, ರಸ್ತೆಗಳಿಗೆ ಸುಣ್ಣವನ್ನು ಚೆಲ್ಲಿ ನೆಲವನ್ನು ಬಡಿದು ಅಚ್ಚುಕಟ್ಟು ಮಾಡಿದರು. ಸುಗಂಧದ ನೀರನ್ನು ಚೆಲ್ಲಿ ಹೂವುಗಳನ್ನು ಎರಚಿದರು. ಸೂಕ್ತಸ್ಥಳಗಳಲ್ಲಿ ಶಿಬಿರಗಳನ್ನು ರಚಿಸಿದರು. ಅದನ್ನು ವಿವಿಧ ರೀತಿಯಲ್ಲಿ ಅಲಂಕರಿಸಿದರು. ಗುಡಾರಗಳನ್ನು ನಿರ್ಮಿಸಿದರು. ದೇವಾಲಯಗಳನ್ನು ಅಳವಡಿಸಿದರು. ಗಂಗಾನದಿಯವರೆಗೆ ರಾಜಮಾರ್ಗ ನಿರ್ಮಾಣವಾಯ್ತು.

ಭರತನ ಜೊತೆಯಲ್ಲಿ ಹೊರಟ ಸಮಾಜದ ವಿವಿಧ ವರ್ಗದವರಿವರು: ಮಣಿಕಾರರು, ಕುಂಬಾರರು, ನವಿಲುಗರಿಯಿಂದ ಕೆಲಸ ಮಾಡುವವರು, ಗರಗಸದವರು, ರತ್ನಗಳಿಗೆ ರಂಧ್ರಗಳನ್ನು ಕೊರೆಯುವ ವೇಧಕರು, ಗಂಧಿಗೆಯ ಅಂಗಡಿಯವರು, ಅಕ್ಕಸಾಲಿಗರು, ಕಂಬಳಿ ನೇಯುವ ಗೊಂಗಡಿಕಾರರು, ಅಂಗಮರ್ದಕರು, ಈಡಿಗರು, ಚಿಪ್ಪಿಗರು, ಕಾವಾಡಿಗರು, ನಟರು, ಸದಾಚಾರ ನಿಷ್ಠರಾದ ಬ್ರಾಹ್ಮಣರು—ಎಲ್ಲರೂ ಮನೋಹರವಾಗಿ ಅಲಂಕಾರ ಮಾಡಿಕೊಂಡು ರಥ ಗಜಾಶ್ವಾದಿ ವಿವಿಧ ವಾಹನಗಳನ್ನು ಏರಿ ಹೊರಟರು. ಈ ವರ್ಣನೆಯಿಂದ ಆ ಕಾಲದ ಸಮಾಜದಲ್ಲಿ ವಿವಿಧ ವೃತ್ತಿಯನ್ನವಲಂಬಿಸಿರುವ ನಾನಾ ವ್ಯಕ್ತಿಗಳ ಪರಿಚಯವಾಗುವುದು.

ಭರತನಿಗೆ ನಿಷಧಾಧಿಪತಿಯಾದ ಗುಹನ ಭೇಟಿಯಾಗುವುದು. ಅಲ್ಲಿ ಅವನಲ್ಲಿ ಒಂದೊಂದರಲ್ಲಿ ನೂರು ಜನಗಳು ಕುಳಿತುಕೊಳ್ಳಬಹುದಾದ ಸ್ವಸ್ತಿಕಾಕಾರದ ಐದುನೂರು ನೌಕೆಗಳಿವೆ. ಅವನು ವನವಾಸಿಯಾದರೂ ಅವನು ಪ್ರದರ್ಶಿಸುವ ವಿನಯವು ಬಹು ಸ್ತೋತ್ರಾರ್ಹವಾಗಿದೆ. ಅಪರಿಚಿತನಾದ ಗುಹನು ಭರತನಿಗೆ ತನ್ನ ರಾಜ್ಯವು ಕೋಸಲದೇಶದ ಉದ್ಯಾನವೆಂದು ನಿವೇದಿಸಿಕೊಳ್ಳುತ್ತಾನೆ. ಗುಹನ ನಡತೆ ಆ ಕಾಲದ ವಿನಯದ ಪರಾಕಾಷ್ಠತೆಯನ್ನು ಪ್ರತಿಬಿಂಬಿಸುತ್ತದೆ.

ಭರದ್ವಾಜ ಋಷಿಗಳು ಭರತನಿಗೆ ಏರ್ಪಡಿಸಿದ್ದ ಆತಿಥ್ಯವು ಎಂತಹ ಸುಸಂಸ್ಕೃತವಾದ ನಾಗರಿಕ ಪ್ರಪಂಚವನ್ನೂ ದಂಗು ಬಡಿಸುವಂತಿದೆ. ಭರದ್ವಾಜರು ಕಾಡುತಪಸ್ವಿಗಳು. ಭರತನದು ಲಕ್ಷ ಸಂಖ್ಯೆಯನ್ನು ಮೀರಿದ ಸೈನ್ಯ. ಅಂತಹವರಿಗೆ ಭರದ್ವಾಜರ ಆತಿಥ್ಯ 'ನ ಭೂತೋ ನ ಭವಿಷ್ಯತಿ' ಎನ್ನುವಂತಿರುವ ಸತ್ಕಾರ. ಅದು ಯಾವ ನವ ನಾಗರಿಕ ಸಮಾಜವೂ ಊಹಿಸುವುದಕ್ಕೂ ಆಗದಿರುವಷ್ಟು ವೈಭವಯುತವಾಗಿದೆ. ಅಲ್ಲಿ ಸುಗಂಧದ ಕುಸುಮ ವೃಷ್ಟಿ, ಅಪ್ಸರೆಯರ ನೃತ್ಯ, ಗಂಧರ್ವರ ಹಾಡುಗಾರಿಕೆ, ವೀಣಾವಾದನ, ಕರ್ಣಾನಂದಕರವಾದ ನಾದಮಾಧುರ್ಯ, ವಿವಿಧ ಫಲವೃಕ್ಷಗಳಿಂದ ಕೂಡಿದ ಉದ್ಯಾನ, ಅದರ ಮಧ್ಯದಲ್ಲಿ ಭರತನಿಗೆ ಚೈತ್ರರಥವೆಂಬ ಮಣಿರತ್ನ ಖಚಿತವಾದ ಪ್ರಾಸಾದ, ಅದರ ಮಧ್ಯದಲ್ಲಿ ರತ್ನ ಖಚಿತವಾದ ಉನ್ನತಾಸನ, ವಿವಿಧ ರೀತಿಯ ಭಕ್ಷ್ಯ, ಭೋಜ್ಯ, ಚೋಶ್ಯ, ಲೇಹ್ಯ, ಪದಾರ್ಥಗಳಿಂದ ಕೂಡಿದ ಷಡ್‌ರಸೋಪೇತವಾದ ಭೋಜನದ ಏರ್ಪಾಡು, ಹೂವಿನ ಮಾಲೆಗಳು, ವಿವಿಧ ಪೇಯಗಳು, ಭದ್ರ ಪೀಠದ ಇಕ್ಕೆಡೆಗಳಲ್ಲಿ ಚಾಮರ ಗ್ರಾಹಿಣಿಯರು, ವಿವಿಧ ಆಭರಣಗಳಿಂದ ಅಲಂಕೃತರಾದ ಇಪ್ಪತ್ತು ಸುಂದರಿಯರ ಪರಿಚರ್ಯೆ, ಮಧ್ಯೆ ಮಧ್ಯೆ ತುಂಬುರ, ಗೋಪಿ, ಗಂಧರ್ವರ ಗಾನಗೋಷ್ಠಿ, ಅನವರತವಾದ ಪುಷ್ಪವೃಷ್ಟಿ, ಮೃದಂಗಾದಿ ವಾದ್ಯಗಳ ಬಾಜನೆ, ಗಜಾಶ್ವಾದಿಗಳಿಗೆ ತೃಪ್ತಿಕರವಾದ ಆಹಾರ, ಅವುಗಳ ಸ್ನಾನಕ್ಕೆ ಪ್ರತ್ಯೇಕವಾದ ಜಲಾಶಯ, ಅಪ್ಸರಸ್ತ್ರೀಯರ ಅಂಗಮರ್ದನದಿಂದ ಕೂಡಿದ ಅಭ್ಯಂಗನ, ಅಂಗ ಲೇಪನಕ್ಕೆ ಬೇಕಾದ ಪದಾರ್ಥಗಳು, ಸ್ನಾನ ಚೂರ್ಣ, ಉಪಾನಹ, ಕನ್ನಡಿಗಳು—ಮೊದಲಾದ ಅನೇಕ ಅಲಂಕಾರ ಸಾಮಗ್ರಿಗಳು. ಈ ಸನ್ನಿವೇಶವನ್ನು ಬಿಟ್ಟುಹೋಗಲು ಇಷ್ಟವಿಲ್ಲದ ಮನೋಭಾವ. ಈ ವಿಧವಾದ ಕಲ್ಪನೆ ಎಂತಹ ಸುಸಂಸ್ಕೃತ ಸಮಾಜಕ್ಕೆ ಸಾಧ್ಯ?

ರಾಮಾಯಣದಲ್ಲಿ ಅನೇಕ ಆಶ್ರಮಗಳ ಬಹು ಮನೋಹರವಾದ ವರ್ಣನೆಗಳು ಬರುತ್ತವೆ. ವಿಶ್ವಾಮಿತ್ರ, ಶರಭಂಗ, ಸುತೀಕ್ಷ್ಣ, ಅಗಸ್ತ್ಯ, ವಾಲ್ಮೀಕಿ, ಮೊದಲಾದವರ ಆಶ್ರಮಗಳು ಚಿತ್ತಾಕರ್ಷಕವಾಗಿ ವರ್ಣಿತವಾಗಿವೆ. ಒಂದು ಮತ್ತೊಂದರಂತಿಲ್ಲ. ಎಲ್ಲಿ ನೋಡಿದರೂ ಫಲ ಪುಷ್ಪದ ವೃಕ್ಷಗಳು, ಜಲಪೂರ್ಣವಾದ ಸರೋವರಗಳು, ಪುಷ್ಪಾಪಚಯ, ಯಜ್ಞಧೂಮ, ಆರ್ದ್ರವಸ್ತ್ರವನ್ನು ಧರಿಸಿರುವ ತಾಪಸಿಗಳು, ವೈರವಿಲ್ಲದ ಪ್ರಾಣಿಗಳು, ಶಾಂತವಾತಾವರಣ, ಅಲ್ಲಿಯ ಆತಿಥಿಸತ್ಕಾರ–ಇವು ಅವರ್ಣನೀಯ. ಆ ಆಶ್ರಮಗಳಲ್ಲಿ ವೈಖಾನಸ, ವಾಲಖಿಲ್ಯ, ಸಂಪ್ರಕ್ಷಾಲ, ಮರೀಚಿಪ, ಅಂಶುಪಟ್ಟ, ಪತ್ರಾಹಾರ, ಮೊದಲಾದವರೂ ಇದ್ದಾರೆ. ಇವರಲ್ಲಿ ಕೆಲವರು ದಂತೋಲೂಖಲರು, ಉನ್ಮಜ್ಜಕರು, ರಾತ್ರಿಶಯರು, ಸಲಿಲಾಹಾರರು, ವಾಯುಭಕ್ಷಕರು, ಆಕಾಶನಿಲಯರೂ, ಸ್ಥಂಡಿಲಶಾಯಿಗಳು, ಊರ್ಧ್ವವಾಸಿಗಳು, ಆರ್ದಪಟರು, – ಎಲ್ಲರೂ ಸೇರಿದ್ದಾರೆ. ಕೆಲವು ಆಶ್ರಮಗಳಂತೂ ವಿಶೇಷ ಪ್ರಸಿದ್ಧಿಯಾಗಿವೆ. ಅಗಸ್ತ್ಯರ ಆಶ್ರಮದಲ್ಲಿ ಸುಳ್ಳುಗಾರರೂ, ಕ್ರೂರಿಗಳೂ, ಕಪಟಿಗಳೂ, ಕೊಲೆಗಾರರೂ, ಸ್ವೇಚ್ಛಾಚಾರರೂ ಇರಲಿಲ್ಲ. ದೇವತೆಗಳೂ ಪತಗರೂ ಯಕ್ಷಕಿನ್ನರರೂ ಇಲ್ಲಿ ತಪಸ್ಸಿದ್ಧಿಗಾಗಿ ಬಂದು ಸೇರಿದ್ದರು. ಇಲ್ಲಿ ತಪಸ್ಸು ಮಾಡಿ ಉದ್ದೇಶ ಸಾಧಿಸಿಕೊಂಡು ಸ್ವರ್ಗಕ್ಕೇರಿದವರು ಅನೇಕರು. ಇವು ಆ ಕಾಲದ ಋಷಿ ಸಮಾಜದ ಪ್ರತ್ಯಕ್ಷ ದರ್ಶನವನ್ನು ಕೊಡತಕ್ಕವಾಗಿವೆ.

ವಾನರ ಸಮಾಜದ ಚಿತ್ರಣವು ರಾಮಾಯಣದಲ್ಲಿ ವಿವರವಾಗಿಯೇ ಚಿತ್ರಿತವಾಗಿದೆ. ಲಕ್ಷ್ಮಣನು ಕಂಡ ಕಿಷ್ಕಿಂಧೆಯ ವರ್ಣನೆಯು ಈ ರೀತಿಯಲ್ಲಿದೆ. ಸಂಪದ್ಭರಿತವಾದ ಆ ನಗರವು ರತ್ನಗಳಿಂದ ತುಂಬಿದ್ದವು. ಉಪ್ಪರಿಗೆಯ ಮನೆಗಳು ದೇವಾಲಯಗಳು ಅಧಿಕಸಂಖ್ಯೆಯಲ್ಲಿದ್ದವು. ಅಂಗಡಿಗಳಲ್ಲಿ ನಾನಾ ಬಗೆಯ ಸರಕುಗಳು ತುಂಬಿದ್ದವು. ಎಲ್ಲಿ ನೋಡಿದರೂ ಸರ್ವದಾ ಹಣ್ಣು ಹೂವುಗಳಿಂದ ತುಂಬಿ ತುಳುಕುವ ವೃಕ್ಷಗಳು, ಕಾಮ ರೂಪಿಗಳೂ, ದಿವ್ಯ ಮಾಲೆಗಳನ್ನೂ, ದಿವ್ಯ ವಸ್ತ್ರಗಳನ್ನೂ ಧರಿಸಿರುವ ವೀರವಾನರರ ಆಕೃತಿಯು ಬಹುಸುಂದರವಾಗಿತ್ತು. ಚಂದನ, ಅಗರು, ಪದಕ, ಎಂಬ ಸುಗಂಧ ದ್ರವ್ಯಗಳ ವಾಸನೆಯು ಎಲ್ಲೆಲ್ಲಿಯೂ ವ್ಯಾಪಿಸಿತ್ತು, ಮೈರೇಯ ಮಧು ಮತ್ತು ಮದ್ಯ ಎಂಬ ಪಾನೀಯಗಳು ಎಲ್ಲ ಅಂಗಡಿಗಳಲ್ಲೂ ಪ್ರದರ್ಶಿತವಾಗಿತ್ತು ರಾಜಬೀದಿಯಲ್ಲಿ ಕಪಿವೀರರ ಭವನಗಳು ದಿವ್ಯ ಸುಂದರವಾಗಿ ಅಲಂಕರಿಸಲ್ಪಟ್ಟಿದ್ದವು. ಮಧ್ಯ ಬೀದಿಯ ತುದಿಯಲ್ಲಿ ಅರಮನೆ. ಅದರ ಸುತ್ತಲೂ ಎತ್ತರವಾದ ರಮಣೀಯವಾದ ಪ್ರಾಕಾರ. ಅರಮನೆಯ ಮೇಲೆ ಕಲಶ ಗೋಪುರಗಳು, ಬಲಾಢ್ಯರಾದ ಕಪಿವೀರರಿಂದ ಕಾವಲು, ಸುವರ್ಣತೋರಣ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಅರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಸಪ್ತ ಕಕ್ಷೆಗಳ ಮಧ್ಯೆ ಅಂತಃಪುರ, ಅಲ್ಲಿ ಶ್ರೇಷ್ಠವಾದ ಚಿನ್ನ ಬೆಳ್ಳಿಗಳಿಂದ ನಿರ್ಮಿತವಾದ ಮಂಚ ಮತ್ತು ಶಯ್ಯೆ, ಮಧುರವಾದ ರಾಗಧ್ವನಿ, ಅದರೊಡನೆ ವೀಣಾವಾದನ, ಹಾಡುಗಾರಿಕೆ, ಸುಂದರ ಸ್ತ್ರೀಯರ ನಾಟ್ಯ, ಈ ಮಧ್ಯೆ ಎತ್ತರವಾದ ಆಸನದಲ್ಲಿ ಮಂಡಿತನಾಗಿರುವ ರುಮಾಸಹಿತನಾದ ಸುಗ್ರೀವ. ಈ ವೈಭವದ ಚಿತ್ರಣ ವಾನರ ಸಮಾಜದ ಸಂಪೂರ್ಣ ಚಿತ್ರಣವನ್ನು ಕೊಡತಕ್ಕದಾಗಿದೆ.

ರಾಮಾಯಣದಲ್ಲಿ ಬರುವ ರಾಕ್ಷಸ ಸಮಾಜದ ಚಿತ್ರ ಇನ್ನೂ ವೈಭವ ಪೂರ್ಣವಾಗಿದೆ. ಅದರ ಶ್ರೀಮಂತಿಕೆ ಮತ್ತೆಲ್ಲವನ್ನೂ ಮೀರಿ ಪ್ರಭಾವಶಾಲಿಯಾಗಿದೆ. ರಾವಣನ ರಾಜಧಾನಿಯಾದ ಲಂಕಾಪಟ್ಟಣವು ತನ್ನ ವೈಭವದಲ್ಲಿ ತ್ರಿಲೋಕಗಳನ್ನೂ ಮೀರಿತ್ತು. ಅಲ್ಲಿಯ ಉಪ್ಪರಿಗೆಯ ಮನೆಗಳಲ್ಲಿ ಚಿನ್ನಬೆಳ್ಳಿಯ ಕಂಬಗಳೂ ಸುವರ್ಣದ ಗವಾಕ್ಷಗಳೂ ಏಳೆಂಟು ಮಹಡಿಗಳೂ ಸ್ಫಟಿಕ ಮಣಿಗಳ ನೆಲೆಗಟ್ಟುಗಳೂ ವೈಢೂರ್ಯದ ಕುಚ್ಚುಗಳೂ ಚಿನ್ನದ ತೋರಣಗಳೂ ಇರುತ್ತಿದ್ದವು. ಅಲ್ಲಿಯ ರತ್ನ ನಿರ್ಮಿತವಾದ ಮೆಟ್ಟಲುಗಳ ಉಭಯ ಪಾರ್ಶ್ವಗಳಲ್ಲಿ ಚಿನ್ನದ ಆನೆಯ ಕಾಲುಗಳಿದ್ದವು. ಗೃಹಗಳ ಸುತ್ತಲೂ ಬಹು ರಮ್ಯವಾದ ಹೂತೋಟ, ಕ್ರೌಂಚಪಕ್ಷಿ, ರಾಜಹಂಸ, ನವಿಲುಗಳು ಇವುಗಳ ಇಂಪಾದ ಧ್ವನಿ, ಬೀದಿಗಳಲ್ಲಿ ಒಂದುಕಡೆ ವಾದ್ಯ ಧ್ವನಿ, ಮತ್ತೊಂದು ಕಡೆ ಸ್ತ್ರೀಯರ ಆಭರಣಗಳ ನಾದ, ಭವನಗಳೆಲ್ಲ ಆಕಾಶಕ್ಕೆ ಹಾರಿ ಹೋಗುತ್ತವೆಯೋ ಎಂಬಂತೆ ಪರ್ವತದ ಶೃಂಗಗಳ ಮೇಲೆ ನಿರ್ಮಿತವಾಗಿದ್ದವು. ಪ್ರಾಕಾರದ ಸುತ್ತಲೂ ಆಳವಾದ ಕಂದಕ, ಕೋಟೆಯ ಒಳಗಡೆ ಸ್ವಸ್ತಿಕ, ಪದ್ಮಕ, ವರ್ಧಮಾನಕ, ಎಂಬ ವಿವಿಧ ರೀತಿಯ ಗೃಹಗಳು. ಚತುರಂಗ ಸೈನ್ಯದಿಂದಲೂ ಭೀಷಣವಾದ ಮೃಗಗಳಿಂದಲೂ ನಗರದ ಕಾವಲು, ಭೋಗವಿಲಾಸದಿಂದ ಕೂಡಿದ ಜನಸಂದಣಿ, ಪಾಕಶಾಲೆಯಲ್ಲಿ ಸಮಸ್ತ ಭೋಜ್ಯ ಭಕ್ಷ್ಯಾದಿಗಳಿಂದ ಕೂಡಿದ ವಿವಿಧ ಆಹಾರಗಳ ರಾಶಿ. ಅಂತಃಪುರದಲ್ಲಿ ವಿವಿಧ ರೀತಿಯ ಶಯ್ಯೆ ಆಸನ ಮತ್ತು ಭೋಗಸಾಮಗ್ರಿಗಳು. ನಿದ್ರಿತರಾಗಿದ್ದ ಸ್ತ್ರೀಯರು ವೀಣೆ, ಪಣವ, ಡಿಂಡಿಮ, ಮೃದಂಗ ಮೊದಲಾದ ವಾದ್ಯಗಳನ್ನು ನೆಮ್ಮಿಕೊಂಡು ಮಲಗಿದ್ದರು, ಪಕ್ಕದಲ್ಲಿಯೇ ಇದ್ದ ಪುಷ್ಪಕ ವಿಮಾನವು ಸಮಸ್ತವಾದ ಶಿಲ್ಪಕಲಾ ಕೌಶಲಗಳಿಂದ ಮನೋಹರವಾಗಿದ್ದಿತು. ಇವೆಲ್ಲಕ್ಕೂ ನಾಯಕನಾದ ರಾವಣನಿಗೆ ಯಾವ ವಿಧದಲ್ಲಿಯೂ ಕೊರತೆಯಿರಲಿಲ್ಲ. ದೇವದಾನವ ಯಕ್ಷಕಿನ್ನರ ಗಂಧರ್ವರಿಗೆ ಮಣಿಯದ ಮಹಾಯೋಧ. ಕುಬೇರನಿಂದಲೇ ಪುಷ್ಪಕ ವಿಮಾನವನ್ನು ಕಸಿದುಕೊಂಡು ಬಂದ ವೀರಾಗ್ರಣಿ. ಇಂದ್ರನನ್ನೇ ಪರಾಭವಗೊಳಿಸಿದ ಮಹಾಬಲಿಷ್ಠರಾದ ಇಂದ್ರಜಿತ್ತು ಅಕ್ಷಯ ಕುಮಾ

ರಾದಿ ಮಕ್ಕಳು. ಯುದ್ಧದುರಂಧರರೂ ಮಹಾಕಾಯವುಳ್ಳವರೂ ಆದ ಪ್ರಹಸ್ತ ಅತಿಕಾಯರಂತಹ ಸೇನಾಧಿಪತಿಗಳು. ಇಷ್ಟೆಲ್ಲಾ ವೈಭವವಿದ್ದರೂ ರಾವಣನಿಗೆ 'ಮಹರ್ಷೀಣಾಂ ವಡೌಘೋರಃ ಸರ್ವ ದೇವೈಶ್ಚ ವಿಗ್ರಹಃ। ಅಭಿಮಾನಶ್ಚ ಕೋಪಶ್ಚ ವೈರತ್ವಂ ಪ್ರತಿಕೂಲತ' ಎಂದರೆ ಮಹರ್ಷಿಗಳನ್ನು ಸಂಹಾರಮಾಡುವುದೂ, ಎಲ್ಲ ದೇವತೆಗಳಲ್ಲಿಯೂ ಯುದ್ಧ ಮಾಡುವ ಅಭಿಪ್ರಾಯ, ಅಹಂಭಾವತ್ವ ಕೋಪ ವೈರ ಇವುಗಳಿಂದ ಅವನ ಇತರ ಎಲ್ಲ ಸೌಲಭ್ಯಗಳೂ ನಿಷ್ಪ್ರಯೋಜನವಾದವು. ಪರಧನಾಪಹಾರ ಪರಸ್ತ್ರೀ ಸ್ಪರ್ಶನ, ಮಿತ್ರರಿಗೆ ಕೇಡನ್ನು ಬಯಸುವುದು–ಇವು ಮೂರೂ ಸರ್ವನಾಶಕ್ಕೆ ಕಾರಣವು. ರಾವಣನು ಈ ಅವಗುಣಗಳ ಮೂರ್ತ ಸ್ವರೂಪದವನಾದುದರಿಂದ ರಾವಣನಿಗೆ ಸರ್ವನಾಶವಾಯಿತೆಂಬುವುದು ರಾಮಾಯಣದಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿದೆ.

ರಾಮಾಯಣದಲ್ಲಿ ಚಿತ್ರಿತವಾಗಿಗುವುದು ನಾಗರಿಕತೆಯ ಪರಮೋತ್ಕೃಷ್ಟಭಾಗಕ್ಕೆ ಅಲ್ಲಿ ಧರ್ಮ ಅಗ್ರಸ್ಥಾನ.

ಧರ್ಮಾದರ್ಥಃ ಪ್ರಭವತೇ
ಧರ್ಮಾತ್ಪ್ರಭವತೇ ಸುಖಂ।
ಧರ್ಮೇಣ ಲಭತೇ ಸರ್ವಂ
ಧರ್ಮಸಾರ ಮಿದಂ ಜಗತ್॥

(ಧರ್ಮದಿಂದ ಅರ್ಥ, ಧರ್ಮದಿಂದ ಸುಖ, ಎಲ್ಲ ಅಭಿವೃದ್ಧಿ ಕಾರ್ಯಗಳು ಧರ್ಮದಿಂದ ಮಾತ್ರವೇ ಸಾಧ್ಯ)

ಧರ್ಮಕ್ಕೆ ಮೂಲಭೂತವಾದುದು ಕ್ಷಮೆ. ಅದರ ಸ್ವರೂಪವನ್ನು ಕುಶನಾಭನು ಬಾಲಕಾಂಡದಲ್ಲಿ ಈ ರೀತಿ ನಿರೂಪಿಸುತ್ತಾನೆ.

ಕ್ಷಮಾ ದಾನಂ ಕ್ಷಮಾ ಸತ್ಯಂ
ಕ್ಷಮಾ ಯಜ್ಞಶ್ಚ ಪುತ್ರಿಕಾ।
ಕ್ಷಮಾ ಯಶಃ ಕ್ಷಮಾ ಧರ್ಮಃ
ಕ್ಷಮಯಾ ನಿಷ್ಠಿತಂ ಜಗತ್॥

(ಕ್ಷಮೆಯೇ ದಾನ, ಕ್ಷಮೆಯೇ ಸತ್ಯ, ಕ್ಷಮೆಯೇ ಯಜ್ಞ, ಕ್ಷಮೆಯೇ ಯಶಸ್ಸು, ಕ್ಷಮೆಯೇ ಧರ್ಮ, ಕ್ಷಮೆಯಿಂದಲೇ ಜಗತ್ತು ನಿಂತಿರುವುದು.)

ಧರ್ಮ ಸಂಸ್ಥಾಪನೆಗೆ ಪ್ರಧಾನವಾದ ಪಂಕರ ಸತ್ಯ. ಇದನ್ನು ಶ್ರೀರಾಮನು ಭರತನಿಗೆ ಕಾಡಿನಲ್ಲಿ ಬಹು ಸ್ಪಷ್ಟವಾಗಿ ವಿಶದ ಪಡಿಸಿದ್ದಾನೆ.

ಸತ್ಯಮೇವಾನೃಶಂಸಶ್ಚ
ರಾಜವೃತ್ತಂ ಸನಾತನಂ
ತಸ್ಮಾತ್ ಸತ್ಯಾತ್ಮಕಂ ರಾಜ್ಯಂ
ಸತ್ಯೇ ಲೋಕಃ ಪ್ರತಿಷ್ಠಿತಃ।
ಸತ್ಯಮೇವೇಶ್ವರೋ ಲೋಕೇ
ಸತ್ಯೇ ಪದ್ಮಾ ಪ್ರತಿಷ್ಠಿತಾ
ಸತ್ಯಮೂಲಾನಿ ಸರ್ವಾಣಿ
ಸತ್ಯಾನ್ನಾಸ್ತಿ ಪರಂ ಪದಂ॥

ಆದುದರಿಂದ ಸಮಾಜದಲ್ಲಿ ;

ಪರದಾರಾಭಿಗಮನಂ
ವಿನಾ ವೈರಂ ಚ ರೌದ್ರತಾ
ಮಿಥ್ಯಾವಾಕ್ಯಂ ನ ತ್ರೈರ್ಭೂತಂ ನ ಭವಿಷ್ಯತಿ॥

(ಪರದಾಲಾಭಿಗಮನ, ಕಾರಣವಿಲ್ಲದ ದ್ವೇಷ, ಸುಳ್ಳು ಹೇಳುವುದು–ಇವು ಮೂರೂ ಸಮಾಜದಲ್ಲಿ ತ್ಯಾಜ್ಯವಾದ ಗುಣಗಳು)

ರಾಮಾಯಣ ಕಾಲದ ಜನಜೀವನದ ಒಂದು ಹಕ್ಕಿನೋಟವನ್ನೂ ಮುಗಿಸುವ ಮೊದಲು ಆ ಕಾಲದ ಯೌದ್ಧಿಕ ಪ್ರಪಂಚವನ್ನು ಕುರಿತು ಒಂದು ಮಾತನ್ನು ಆಡಲೇಬೇಕು. ಆಕಾಲದ ಜನಗಳಲ್ಲಿ ಋಷಿ ಸಮೂಹವನ್ನು ಬಿಟ್ಟು ಉಳಿದವರಿಗೆಲ್ಲ ಯುದ್ಧ ವಿಷಯದಲ್ಲಿ ಬಹು ಆಸಕ್ತಿಯಿದ್ದಂತೆ ಕಾಣುತ್ತದೆ. ವಾಲ್ಮೀಕಿ ಋಷಿಗಳು ರಾಮಾಯಣದ ಮೊದಲು ಐದು ಕಾಂಡಗಳಲ್ಲಿ ಯುದ್ಧದ ವಿಷಯವಾಗಿ ಅಲ್ಲಲ್ಲಿ ವರ್ಣಿಸಿದ್ದರೂ ಅದಕ್ಕಾಗಿಯೇ ಒಂದು ಕಾಂಡವನ್ನು ಪ್ರತ್ಯೇಕವಾಗಿ ಮೀಸಲಾಗಿಸಿದ್ದಾರೆ. ಉಳಿದ ಕಾಂಡಗಳಿಗಿಂತ ಯುದ್ಧಕಾಂಡವು ಬಹು ದೊಡ್ಡದಾಗಿ ನೂರ ಮೂವತ್ತೊಂದು ಸರ್ಗಗಳಿಂದ ಕೂಡಿದೆ. ಇದರಲ್ಲಿಯ ಯುದ್ಧ ಪ್ರಾರಂಭ, ಪ್ರಯಾಣಭೇರಿ, ಚತುರಂಗ ಸೈನ್ಯದ ವಿವರಣೆ, ವಿವಿಧ ಶಸ್ತ್ರಾಸ್ತ್ರಗಳು, ಬೇರೆಬೇರೆಯ ಯುದ್ಧ ಕೌಶಲ್ಯದ ಪ್ರದರ್ಶನ, ರಥಗಳ ಅಲಂಕಾರ, ಯುದ್ಧಭೂಮಿಯ ವರ್ಣನೆ, ಸತ್ತವರ ಆಕ್ರಂದನ, ಗೆದ್ದವರ ಜಯಘೋಷಣ, ಯುದ್ಧಭೂಮಿಯ ಕರ್ಕಶತೆ, ವೀರರ ಆಲಾಪ, ಮೊದಲೆ–ಇವುಗಳು ಕಾವ್ಯವನ್ನು ಓದುತ್ತಿರುವಾಗ ಕಿವಿಯಲ್ಲಿ ಅನುರಣನ ಮಾಡುತ್ತಿರುತ್ತವೆ.

ರಾಮಲಕ್ಷ್ಮಣಾದಿಗಳಿಗೆ ದಿವ್ಯಾಸ್ತ್ರಗಳ ಸಂಪೂರ್ಣ ಬಲವಿರುತ್ತದೆ. ಅವರಿಗೆ ವಿಶ್ವಾಮಿತ್ರರು ಅವರನ್ನು ತಮ್ಮ ಆಶ್ರಮಕ್ಕೆ ಕರೆದುಕೊಂಡು ಹೋಗುವಾಗಲೇ ಮೊದಲು ಬಲ ಮತ್ತು ಅತಿಬಲ ಎಂಬ ಮಹಾಮಂತ್ರೋಪದೇಶ ಮಾಡಿದರು. ಅದರಿಂದ ಅವರಿಗೆ ಅಸಾಧ್ಯವಾದ ಶಕ್ತಿಯುಂಟಾಯಿತು. ಅಲ್ಲದೆ ವಿವಿಧ ದೇವತಾತ್ಮಕಗಳಾದ ಅಸ್ತ್ರ, ಖಡ್ಗ, ಗದೆ ಮೊದಲಾದ ಐವತ್ತು ವಿವಿಧ ರೀತಿಯ ಆಯುಧಗಳ ಪ್ರಯೋಗಗಳನ್ನು ಉಪದೇಶಿಸಿದರು. ಹಾಗೆಯೇ ಅವುಗಳ ಉಪಸಂಹಾರ ಕ್ರಮವನ್ನು ಅವುಗಳಿಗೆ ಸಂಬಂಧಪಟ್ಟ ಮಂತ್ರಗಳ ರಹಸ್ಯವನ್ನೂ ತಿಳಿಸಿದರು. ರಾಮನಿಗೆ ಪರಶುರಾಮನಿಂದ ವೈಷ್ಣವಾಸ್ತ್ರವು ಹಸ್ತಗತವಾಯಿತು. ಅಗಸ್ತ್ಯರು ಬ್ರಹ್ಮಾಸ್ತ್ರವನ್ನು ದಾನ ಮಾಡಿದರು. ಇವೆಲ್ಲವುಗಳಿಂದ ರಾಮಲಕ್ಷ್ಮಣರು ಪಾದಚಾರಿಗಳಾಗಿಯೇ ಧರ್ಮಯುದ್ಧ ಮಾಡಿದರು. ರಾವಣ–ಸಂಹಾರ ಕಾಲದಲ್ಲಿ ಇಂದ್ರನ ಸಾರಥಿಯಾದ ಮಾತಲಿ ಮತ್ತು ರಥಾಶ್ವಗಳ ಸಹಾಯ ಒದಗಿ ಅಗಸ್ತ್ಯರ ಆದಿತ್ಯಹೃದಯದ ಉಪದೇಶದಿಂದ ರಾವಣನ ಶಿರಚ್ಛೇದನ ಮಾಡಲು ಸಾಧ್ಯವಾಯಿತು.

ವಾನರರು ಯಾವ ಶಸ್ತ್ರಾಸ್ತ್ರಗಳನ್ನೂ ಉಪಯೋಗಿಸಿರುವಂತೆ ಕಾಣುವುದಿಲ್ಲ. ಅವರುಗಳೆಲ್ಲ ಮುಖತಃ ದ್ವಂದ್ವ ಯುದ್ಧವನ್ನು ಮಾಡುತ್ತಿದ್ದರು. ಅನೇಕ ಯುದ್ಧಕೌಶಲ್ಯವನ್ನು ಬಲ್ಲವರಾಗಿದ್ದರು. ಸುಗ್ರೀವನು ರಾವಣನೊಡನೆ ಯುದ್ಧಮಾಡುವಾಗ ಅನೇಕ ಮಂಡಲಗಳಲ್ಲಿ ಸುತ್ತುತ್ತಾ ವಿವಿಧ ಸ್ಥಾನಗಳಲ್ಲಿ ನಿಲ್ಲುತ್ತಾ, ಗೋಮೂತ್ರಿಕಾದಿ ಗತಿಗಳಿಂದ ಚಲಿಸುತ್ತಾ ಗತಪ್ರತ್ಯಾದಿಗಳಿಂದ ಸರಿಯುತ್ತಾ, ತಿರಶ್ಚೀನ ಗತಿಗಳನ್ನೂ ಬಳಸುತ್ತಾ, ಎದುರಾಳಿಯ ಹೊಡೆತವನ್ನು ಪರಿತೋಷ, ಮರ್ದನ, ಪರಿಭಾವನೆಗಳಿಂದ ತಪ್ಪಿಸಿಕೊಳ್ಳುತ್ತಾ ಅಭಿದ್ರವಣ, ಆಪ್ಲಾವ, ಆಸ್ಥಾನ, ಪರಾವೃತ್ತ, ಅಪಾವೃತ್ತ, ಅವಪ್ಲುತ, ಉಪನ್ಯಸ್ತ, ಅಪನ್ಯಸ್ತ – ಮುಂತಾದ ಪಟ್ಟುಗಳಿಂದ ಹೊಡೆ ದಾಡಿದನು. ಆಕಾಶ ಯುದ್ಧದಲ್ಲಿ ಅವನು ಬಹುಪ್ರವೀಣ.

ಸಾಮಾನ್ಯ ವಾನರರು ಬಂಡೆ, ಬೆಟ್ಟದ ಶಿಖರ, ಬೇರುಸಹಿತವಾದ ಮರಗಳು–ಇವುಗಳನ್ನು ತಮ್ಮ ಆಯುಧಗಳನ್ನಾಗಿ ಉಪಯೋಗಿಸುತ್ತಿದ್ದರು. ಅವರು ರಾಕ್ಷಸರನ್ನು ಅಂಗೈಯಿಂದ ಅಪ್ಪಳಿಸಿ ಕಾಲುಗಳಿಂದ ತುಳಿದು ಮುಷ್ಟಿಗಳಿಂದ ಗುದ್ದಿ ಮರಗಳಿಂದ ಬಡಿದು ತೋಳುಗಳಿಂದ ತಿವಿದುಕೊಂಡು ಹಾಕುತ್ತಿದ್ದರು.

ರಾಕ್ಷಸರು ಯುದ್ಧವಿದ್ಯೆಯಲ್ಲಿ ಬಹು ನಿಪುಣರು. ಯುದ್ಧಕ್ಕೆ ಹೊರಡುವ ಮೊದಲು ವಿವಿಧ ರೀತಿಯಲ್ಲಿ ಅಲಂಕರಿಸಿಕೊಳ್ಳುತ್ತಿದ್ದರು. ಬ್ರಾಹ್ಮಣರಿಗೂ ದೇವತೆಗಳಿಗೂ ನಮಸ್ಕರಿಸಿ ಅಗ್ನಿಕಾರ್ಯವನ್ನು ಮುಗಿಸುತ್ತಿದ್ದರು. ತಾವು ಮದ್ಯಪಾನ ಮಾಡಿ ಗಜಾಶ್ವಾದಿಗಳಿಗೂ ಮದ್ಯಪಾನ ಮಾಡಿಸುತ್ತಿದ್ದರು. ಅವರು ಯುದ್ಧೋನ್ಮುಖರಾಗಿ ಗಜ, ಅಶ್ವ, ವ್ಯಾಘ್ರ, ಉಷ್ಟ್ರ, ವೃಶ್ಚಿಕ, ಮಾರ್ಜಾಲ, ಮೂಷಿಕ, ಖರ,

ವರಾಹ, ಶ್ವಾಪದ, ಸಿಂಹ, ಜಂಬುಕ, ಶಶ, ಹಂಸ – ಮುಂತಾದ ಮೃಗಪಕ್ಷಿಗಳ ವಾಹನಗಳನ್ನೇರಿ ಹೋಗುತ್ತಿದ್ದರು. ರಥಿಗಳು ತಮ್ಮ ರಥಗಳನ್ನು ಕಿಂಕಿಣಿ ಜಾಲಗಳಿಂದ ಬಹು ಸುಂದರವಾಗಿ ಅಲಂಕರಿಸಿ ಧ್ವಜಪತಾಕಾದಿಗಳನ್ನೂ ಅಳವಡಿಸಿ ಅವುಗಳಿಗೆ ಪ್ರದಕ್ಷಿಣ ನಮಸ್ಕಾರ ಮಾಡಿ ರಥವನ್ನು ಹತ್ತುತ್ತಿದ್ದರು. ಕ್ಷುರ, ಕ್ಷುರಪ್ರ, ನಾರಾಚ, ವತ್ಸದಂತ, ಶಿಲೀಮುಖ, ಕರ್ಣಿ, ಶಲ್ಯ, ವಿಕಾರ, ಶಕ್ತಿ, ಖಡ್ಗ, ಗದಾ, ಕುಂತ ತೋಮರ, ಪಟ್ಟಿಸ, ಭಿಂಡಿವಾಳ, ಬಾಣ, ಪಾತ್ರಿ ಸಮಂತಕ– ಮೊದಲಾದ ಅನೇಕ ಆಯುಧಗಳನ್ನು ಉಪಯೋಗಿಸುತ್ತಿದ್ದರು. ಯುದ್ಧಭೂಮಿಗಳಲ್ಲಿ ರಥನೇಮಿಗಳ ಚೀತ್ಕಾರ, ಧನುಸ್ಸುಗಳ ಟಂಕಾರ, ಶಂಖಗಳ ಭೋಂಕಾರ ಭೇರಿ, ಮೃದಂಗಗಳ ಬಂಭಾಕಾರ–ಇವು ದಶದಿಕ್ಕುಗಳಲ್ಲಿಯೂ ಮೊಳಗುತ್ತಿದ್ದವು. ಭಟರ ಮೂದಲಿಗಳೂ ವಿಜಯಿಗಳ ಜಯಘೋಷವೂ ಗಗನವನ್ನು ಆಕ್ರಮಿಸುತ್ತಿದ್ದವು. ಅವರು ಅಭಿಚಾರಕ ಕೃತ್ಯಗಳಲ್ಲಿ ತೊಡಗುತ್ತಿದ್ದರು. ಕ್ಷುದ್ರದೇವತೆಗಳ ತೃಪ್ತಿಗಾಗಿ ಬಹು ರಹಸ್ಯವಾಗಿ ಜೀವಸಹಿತವಾದ ಕರಿಯ ಆಡಿನ ತಲೆಯನ್ನು ಹಿಸುಕಿ ಹಾಕುತ್ತಿದ್ದರು. ರಾವಣನು ಸೀತೆಯನ್ನು ರಾಮನ ಮಾಯಾಶಿರಸ್ಸಿನಿಂದ ಮೋಸಗೊಳಿಸಲು ಯತ್ನಿಸಿದನು. ಇಂದ್ರಜಿತುವು ಹನುಮಂತನ ಎದುರಿಗೆ ಮಾಯಾಸೀತೆಯನ್ನು ಕತ್ತರಿಸಿದನು. ಅವನೇ ನಿಕುಂಭಿಲಾಯಾಗವನ್ನು ಮಾಡಲು ಯತ್ನಿಸಿದನಾದರೂ ಪೂರ್ಣ ಮಾಡಲಾಗಲಿಲ್ಲ.

ರಾಮಾದಿಗಳ ಪಕ್ಷಕ್ಕೆ ಮೃತ ಸಂಜೀವಿನಿ (ಸತ್ತವರನ್ನು ಬದುಕಿಸುವ ಮೂಲಿಕೆ) ಸೌವರ್ಣಕರಣಿ (ಗಾಯದ ಗುರುತನ್ನು ಹೋಗಲಾಡಿಸಿ ಚರ್ಮವನ್ನು ಮೊದಲ ಬಣ್ಣಕ್ಕೆ ತರುವ ಮೂಲಿಕೆ) ಸಂಧಾನ ಕರಣಿ (ಚರ್ಮವನ್ನು ಒಟ್ಟುಗೂಡಿಸುವ ಮೂಲಿಕೆ) ಇವುಗಳ ಸಹಾಯವಿರುತ್ತಿದ್ದವು. ರಾಕ್ಷಸರು ಶವವನ್ನು ತಕ್ಷಣವೇ ಸಮುದ್ರದಲ್ಲಿ ಎಸೆಯುತ್ತಿದ್ದುದರಿಂದ ಅವರಿಗೆ ಇಂತಹ ಮೂಲಿಕೆಗಳಿಂದ ಯಾವ ಪ್ರಯೋಜನವೂ ಆಗುತ್ತಿರಲಿಲ್ಲ.

ಯುದ್ಧದ ಸಂದರ್ಭದಲ್ಲಿ ಬರುವ ಸಂಖ್ಯಾ ಪರಿಮಾಣ ಈಗ ಊಹಿಸುವುದಕ್ಕೂ ಅಸಾಧ್ಯವಾಗಿದೆ. ಅಲ್ಲಿ ಸೇರಿದ್ದ ವಾನರರ ಸೈನ್ಯದ ಪರಮಾವಧಿ ಸಂಖ್ಯೆ 'ಮಹೌಘ' ಎಂಬುವುದೇ. ಈ ಸಂಖ್ಯೆ ಹತ್ತಕ್ಕೆ ಅರವತ್ತು ಸೊನ್ನೆಯನ್ನು ಸೇರಿಸುವುದರಿಂದ ಆಗುವ ಸಂಖ್ಯೆ. ಅದರ ಆದಿ ಭಾಗದ ಅಪವರ್ತನವನ್ನು ಕೋಟಿ, ಶಂಖ, ಮಹಾಶಂಖ, ಬೃಂದ, ಮಹಾಬೃಂದ, ಪದ್ಮ, ಮಹಾಪದ್ಮ, ಖರ್ವ ಮಹಾಖರ್ವ, ಸಮುದ್ರ, ಓಘ, ಮಹೌಘ ಎಂಬ ಶಬ್ದಗಳಿಂದ ನಿರ್ದೇಶಿಸಲಾಗಿದೆ. ಇದು ವಾಲ್ಮೀಕಿ ಋಷಿಗಳ ಗಣಿತ ಶಾಸ್ತ್ರದ ಪ್ರಾವೀಣ್ಯವನ್ನು ಪ್ರದರ್ಶಿಸತಕ್ಕದ್ದಾಗಿದೆ.

ಈ ಯುದ್ಧ ವರ್ಣನೆಯ ಭಾಗಗಳಲ್ಲಿಯೂ ಧರ್ಮಪಕ್ಷಕ್ಕೇ ಜಯವೆಂಬುದನ್ನು ಸ್ಥಿರಪಡಿಸಲಾಗಿದೆ.

ರಾಮಾಯಣದ ಕಾಲದ ಆಡಳಿತ ವ್ಯವಸ್ಥೆ ಸಾಂಕುಶ ಪ್ರಭುತ್ವ. ವಾಲ್ಮೀಕಿ ಋಷಿಗಳ ಅಭಿಪ್ರಾಯದಲ್ಲಿ ರಾಜ್ಯದ ಸಮಸ್ತ ಅಭಿವೃದ್ಧಿಗೂ ಅವನತಿಗೂ ರಾಜನೇ ಕಾರಣ.

ರಾಜಾ ಸತ್ಯಂ ಚ ಧರ್ಮಶ್ಚ
ರಾಜಾ ಕುಲವತಾಂ ಕುಲಂ
ರಾಜಾ ಮಾತಾ ಪಿತಾ ಚೈವ
ರಾಜಾ ಹಿತಕರೋ ನೃಣಾಂ।
ಯಥಾ ದೃಷ್ಟಿಃ ಶರೀರಸ್ಯ
ನಿತ್ಯಮೇವ ಪ್ರವರ್ತತೇ
ತಥಾ ನರೇಂದ್ರೋ ರಾಷ್ಟ್ರಸ್ಯ
ಪ್ರಭವೇ ಸತ್ಯಧರ್ಮಯೋಃ॥

ಈ ದೃಷ್ಟಿಯಿಂದ ವಾಲ್ಮೀಕಿಗಳು ರಾಮಾಯಣದ ಉದ್ದಕ್ಕೂ ರಾಜನ ಗುಣದೋಷ ಜವಾಬ್ದಾರಿ ಕರ್ತವ್ಯ – ಮೊದಲಾದ ವಿಷಯಗಳನ್ನು ಬಹು ನಿರ್ದಿಷ್ಟವಾಗಿ ಸ್ಪಷ್ಟಪಡಿಸಿರುವುದಲ್ಲದೆ ಆಯೋಧ್ಯಾಕಾಂಡದ ನೂರನೆಯ ಸರ್ಗವನ್ನು ಪೂರ್ಣವಾಗಿ ಅದಕ್ಕಾಗಿಯೇ ಮೀಸಲಾಗಿಸಿದ್ದಾರೆ.

ಆದರೆ ರಾಜನಿಗೆ ಸ್ವತಂತ್ರಾಧಿಕಾರವಿಲ್ಲ. ಅವನಿಗೆ ಬಹು ಧರ್ಮಿಷ್ಠರೂ ಕಾರ್ಯದಕ್ಷರೂ ಆದ ಮಂತ್ರಿವರ್ಗ ಮತ್ತು ಪುರೋಹಿತವರ್ಗಗಳಿರುತ್ತವೆ. ಅವರ ನೇತೃತ್ವದಲ್ಲಿಯೇ, ಒಪ್ಪಿಗೆಯಿಂದಲೇ ರಾಜ್ಯಭಾರ ಮಾಡಬೇಕು. ವಿಶೇಷ ಸಂದರ್ಭಗಳಲ್ಲಿ ಮಂತ್ರಿಮಂಡಲದ ಒಪ್ಪಿಗೆಯೂ ಸಾಲದು. ಸಮಸ್ತ ಪ್ರಜೆಗಳ ಅಂಗೀಕಾರ ಅಗತ್ಯ. ದಶರಥನು ರಾಮನಿಗೆ ಯುವರಾಜ ಪಟ್ಟಾಭಿಷೇಕ ಮಾಡುವ ಸಂದರ್ಭದಲ್ಲಿ ಅವನು ಕರೆದ ಸಭೆಯಲ್ಲಿ ಮಂತ್ರಿಮಂಡಲವೇ ಅಲ್ಲದೆ ಸಾಮಂತ ರಾಜರೂ ಪುರಪ್ರಮುಖರೂ, ಜಾನಪದ ಮುಖಂಡರೂ ಗ್ರಾಮನಿವಾಸಿಗಳೂ ಭಾಗವಹಿಸಿದ್ದರು. ಸೀತಾವಿವಾಹದ ವಿಷಯದಲ್ಲಿ ದಶರಥನು ಮಂತ್ರಿಗಳ ಅಂಗೀಕಾರ ಬಯಸಿದನು. ರಾಕ್ಷಸ ಸಮಾಜದಲ್ಲಿಯೂ ಈ ಸಂಪ್ರದಾಯ ರೂಢಿಯಲ್ಲಿದ್ದಿತು. ರಾವಣನು ಮೂರನೆಯ ಸಲ ಯುದ್ಧವನ್ನು ನಿಷ್ಕರ್ಷಿಸಲು ಕರೆದ ಸಭೆಯಲ್ಲಿ ಲಂಕಾಪಟ್ಟಣದ ಎಲ್ಲ ಪ್ರಜೆಗಳನ್ನು ಬರಮಾಡಿ ಅವರ ಅಭಿಪ್ರಾಯವನ್ನು ಕೇಳಿದನು. ಶ್ರೀರಾಮನು ವಿಭೀಷಣನ ಪರಿಗ್ರಹದ ವಿಷಯದಲ್ಲಿ ವಾನರ ಪ್ರಮುಖರೆಲ್ಲರ ಅಭಿಪ್ರಾಯವನ್ನೂ ಆಶಿಸಿದನು. ಈ ವಿಧವಾದ ಪ್ರಜಾಪ್ರಭುಗಳ ಸ್ನೇಹ ಬಾಂಧವ್ಯವೇ ಆ ಕಾಲದ ಸಮಾಜದ ಸುವ್ಯವಸ್ಥೆಗೆ ಮೂಲಕಾರಣವಾಗಿತ್ತು. ಈ ತತ್ತ್ವಗಳಿಂದಲೇ ಕೂಡಿದ ರಾಮರಾಜ್ಯದ ಸ್ವರೂಪವನ್ನು ವಾಲ್ಮೀಕಿ ಋಷಿಗಳು ಯುದ್ಧಕಾಂಡದ ಕೊನೆಯಲ್ಲಿ ಬರುವ ರಾಮಪಟ್ಟಾಭಿಷೇಕದ ಸರ್ಗದಲ್ಲಿ ಹೀಗೆ ವಿವರಿಸಿದ್ದಾರೆ.

ಶ್ರೀರಾಮನು ರಾಜ್ಯಭಾರ ಮಾಡುತ್ತಿದ್ದಾಗ ಸ್ತ್ರೀಯರು ವಿಧವೆಯರಾಗಿ ಗೋಳಾಡುವ ಪ್ರಸಂಗವಿರಲಿಲ್ಲ. ಕ್ರೂರಜಂತುಗಳ ಹಾವಳಿಯಿರಲಿಲ್ಲ. ಪ್ರಜೆಗಳಿಗೆ ರೋಗಭಯವಿರಲಿಲ್ಲ. ದೇಶದಲ್ಲಿ ಕಳ್ಳಕಾಕರ ಭೀತಿಯಿರಲಿಲ್ಲ. ಯಾರಿಗೂ ಯಾವ ವಿಪತ್ತೂ ಬರುತ್ತಿರಲಿಲ್ಲ. ಹಿರಿಯರು ಕಿರಿಯರಿಗೆ ಉತ್ತರ ಕ್ರಿಯೆಯನ್ನು ಮಾಡುವ ಸಂದರ್ಭವೇ ಉಂಟಾಗಿರಲಿಲ್ಲ. ರಾಮರಾಜ್ಯವು ಸರ್ವವಿಧದಲ್ಲಿಯೂ ಸಂತೋಷದ ನೆಲೆಯಾಗಿತ್ತು. ನಿಖಿಲ ಜನರೂ ಧರ್ಮನಿಷ್ಠರಾಗಿ ಬಾಳುತ್ತಿದ್ದರು. ಪ್ರಜೆಗಳು ರಾಮನನ್ನೇ ಆದರ್ಶಪುರುಷನನ್ನಾಗಿ ಭಾವಿಸಿ ಎಲ್ಲ ಸಂದರ್ಭಗಳಲ್ಲಿಯೂ ಅವನಂತೆಯೇ ನಡೆಯುತ್ತಿದ್ದರು. ಇಂತಹ ಆದರ್ಶಸಮಾಜ ಸರ್ವಕಾಲ ದೇಶಗಳಿಗೂ ಅನ್ವಯಿಸುವುದರಲ್ಲಿ ಯಾವ ಸಂದೇಹವೂ ಇಲ್ಲ.

---

( 8ನೇ ಪುಟದಿಂದ )

ತೋಯಧಿ–ಬೇಡಿದವರಿಗೆ ಬೇಡಿದ್ದನ್ನನು-ಗ್ರಹಿಸುವ ಕೃಪಾವಾರಿಧಿ.

ಶ್ರೀಮಾತೆಯು ನಿವಾಸಸ್ಥಾನವೆಲ್ಲಿದೆ? ಭಗವತ್ಪಾದರು ಹೇಳುತ್ತಾರೆ–

ಸುಧಾಸಿಂಧೋರ್ಮಧ್ಯೇ
ಸುರ ವಿಟಪೀವಾಟೀ ಪರಿವೃತೇ ।
ಮಣಿದ್ವೀಪೇ ನೀಪೋಪವನವತಿ
ಚಿನ್ತಾಮಣಿಗೃಹೇ
ಶಿವಾಕಾರೇ ಮಂಚೇ ॥

ಅಮೃತ ಸಮುದ್ರದ ನಡುವೆ, ಕಲ್ಪ ವೃಕ್ಷಗಳಿಂದಾವೃತವಾದ ಮರಕತ ಮಣಿಮಯ ದ್ವೀಪದಲ್ಲಿ; ಮಂಗಳಕರ ಭದ್ರ ಪೀಠಾಸೀನೆಯಾಗಿರುವ ಚಿನ್ಮಯಿಯನ್ನು ಭಜಿಸುವವರು ಧನ್ಯರು.

ತಾಂತ್ರಿಕರು ಈ ಶ್ಲೋಕಕ್ಕೆ ವಿಶೇಷವಾಗಿ ಅರ್ಥಮಾಡಿದ್ದಾರೆ. ಭೈರವಾಮಳ, ರುದ್ರಯಾಮಳ, ವಾಮಕೇಶ್ವರ ಮಹಾ ತಂತ್ರ ಮುಂತಾದ ತಂತ್ರಶಾಸ್ತ್ರಗಳಲ್ಲಿ, ದೇವ್ಯುಪಾಸನಾಪದ್ಧತಿ ಎರಡು ರೀತಿಯಲ್ಲಿದೆ. ಒಂದು ಸಮಯಾಚಾರ, ಇನ್ನೊಂದು ಕುಲಾಚಾರ. ಒಂದು ಅಂತರ ಪೂಜಾ ವಿಧಾನ; ಒಂದು ಬಾಹ್ಯಪೂಜಾವಿಧಾನ. ಶ್ರೀಚಕ್ರದ ಸೃಷ್ಟಿಕ್ರಮ ರಚನೆಯಲ್ಲಿ ಸಮಯಾಚಾರ; ಸಂಹಾರಕ್ರಮ ರಚನೆಯಲ್ಲಿ ಕೌಲಾಚಾರ ಕಂಡುಬರುತ್ತದೆ. "ಶ್ರೀ ಸುಂದರೀಸಾಧನ ತತ್ಪರಾಣಾಂ । ಯೋಗಶ್ಚ ಭೋಗಶ್ಚ ಕರಸ್ಥ ಏವ"– ಎಂದು ಚಕ್ರಾ-ರಾಧನೆಯ ಫಲಸ್ತುತಿ. ಏನೇ ಇರಲಿ-ಅದು ಕ್ಷುರಸ್ಯಧಾರಾ – ಕತ್ತಿಯ ಅಲಗಿನಂತೆ ದುರ್ಗಮ ಪಥ.

ಸಕಲ ವಿದ್ಯಾಸ್ವರೂಪಿಣಿಯಾದ, ಸಕಲ ಶಾಸ್ತ್ರ ಸಂಸ್ತೂಯಮಾನವಿಭವೆಯಾದ, ವೀಣಾಪುಸ್ತಕ ಧಾರಿಣಿಯಾದ ಶಾರದೆ, ಹಿರಣ್ಯವರ್ಣಾಂ ಹರಿಣೀಮ್ – ಎಂದು ಕೀರ್ತಿತಳಾಗಿರುವ, ಕ್ಷೀರವಾರಿಧಿಸಂಜಾತೆಯಾದ ಕಮಲವಾಸಿನಿ ಲಕ್ಷ್ಮಿ, ಪರ್ವತ ರಾಜನ ಪ್ರೇಮದ ಪುತ್ರಿ ಪಾರ್ವತಿ, ಸಿಂಹ ವಾಹಿನಿಯಾಗಿ, ಶುಂಭನಿಶುಂಭ ಮಹಿಷಾಸುರಾದಿ ರಾಕ್ಷಸನಾಶಕ ಪ್ರಳಯಂಕರಿ ಶಕ್ತಿಯಾಗಿ ಮೆರೆದ ದುರ್ಗಿ... ಹೀಗೆ ಚಿಚ್ಛಕ್ತಿ ನಾನಾ ನಾಮರೂಪಧಾರಿಣಿಯಾಗಿದ್ದಾಳೆ. ಏಕಂ ಸತ್ ವಿಪ್ರಾಃ ಬಹುಧಾ ವದನ್ತಿ !!

ನವರಾತ್ರಿಯಲ್ಲಿ ಶಕ್ತಿ ದೇವತಾರಾಧನೆಯನ್ನು ವಿಶೇಷವಾಗಿ ನಡೆಸುವ ಸಂಪ್ರದಾಯ ನಮ್ಮಲ್ಲಿ ಬೆಳೆದು ಬಂದಿದೆ. ನವಾವರಣ ಪೂಜಾಕ್ರಮವೆಂದು ಪ್ರತ್ಯೇಕ ವಿಧಿವಿಧಾನಗಳೇ ರೂಪಿತವಾಗಿವೆ – ಎಂಬುದನ್ನಿಲ್ಲಿ ಸ್ಮರಿಸಬಹುದಾಗಿದೆ.

ಶರಜ್ಜ್ಯೋತ್ಸ್ನಾ ಶುದ್ಧಾಂ
ಶಶಿಯುತ ಜಟಾಜೂಟಮಕುಟಾಂ
ವರತ್ರಾಸತ್ರಾಣ ಸ್ಫಟಿಕ
ಘುಟಿಕಾ ಪುಸ್ತಕ ಕರಾಂ
ಸಕೃನ್ನತ್ವಾ ನತ್ವಾ ಕಥಮಿವ
ಸತಾಂ ಸಂನಿದಧತೇ
ಮಧು ಕ್ಷೀರ ದ್ರಾಕ್ಷಾ ಮಧುರಿ
ಮಧುರೀಣಾಃ ಫಣಿತಯಃ ॥

ಈ ಕವಿತೆಯಲ್ಲಿ, ಭಗವತ್ಪಾದರ, ಅಭಿಪ್ರಾಯ ಗಾಂಭೀರ್ಯವನ್ನು ಗಮನಿಸಬೇಕು. ವೀಣಾಪುಸ್ತಕ ಪಾಣಿಯಾದ ವಾಣಿಯನ್ನು, ಒಂದುಸಲವಾದರೂ ಶ್ರದ್ಧಾಭಕ್ತಿಯಿಂದ ಸೇವಿಸಿ, ಸ್ಮರಿಸಿ, ನಮಿಸದವರು ಮಾಧುರ್ಯ ರಸಪೂರ್ಣವಾದ ಕವಿತೆಯನ್ನು ಹೇಗೆ ತಾನೆ ಬರೆಯಬಲ್ಲರು? ಜಗನ್ಮಾತೆಯ ಲಾವಣ್ಯಪೂರ್ಣ ಪ್ರೋಜ್ವಲವದನಾರವಿಂದದ ಅರುಣಕಾಂತಿಗೂ ಮಹತ್ವವಿದೆ. ಅದನ್ನು ಧ್ಯಾನಿಸದವರು ವಾಗ್ವೈಖರಿಯನ್ನು, ವಾಗ್ವಿಲಾಸ ಪ್ರವೃತ್ತಿಯನ್ನು ಹೇಗೆ ತಾನೆ ಪಡೆಯಲು ಸಾಧ್ಯ?

ಅರುಣಾಖ್ಯಾಂ ಭಗವತೀಮರುಣಾಭಾಂ ವಿಚಿಂತಯೇತ್– ಎನ್ನುತ್ತದೆ ವಾಮಕೇಶ್ವರ ತಂತ್ರಶಾಸ್ತ್ರ. ಆಕೆಯ ಕೃಪಾಪೋಷಿತರೇ ಜಗತ್ತಿನ ಕವಿಗಳು – ವಿದ್ವಾಂಸರು !!

ಈ ಗ್ರಂಥದಲ್ಲಿ ಶೃಂಗಾರವೂ ಸಹ ದೈವೀಸ್ವರೂಪ ಪಡೆದಿರುವುದರಿಂದ ಗಂಭೀರವಾಗಿದೆ; ರುಚಿರ ಶುಚಿಕರ ಶೃಂಗಾರವೆನಿಸಿಕೊಂಡಿದೆ. ಜಗನ್ಮಾತೆಯನ್ನು ಸ್ತುತಿಸಲು ಸೂಕ್ತವಾದ ಮಾತುಗಳನ್ನು ಹೇಗೆ ಪಡೆಯುವುದು, ಯಾರಿಂದ ಎರವಲು ಪಡೆಯುವುದು? ಅಕಾರಾದಿ ಕ್ಷಕಾರಾಂತ ವೈಖರೀವಾಕ್ ಸ್ವರೂಪಿಣೀ–ಎಂದು ಆಕೆಯನ್ನು ಸ್ತುತಿಸಲಾಗಿದೆ. ಚಿನ್ಮಯಿ ಭಗವತಿಯನ್ನು, ಆಕೆಯೇ ಸೃಷ್ಟಿಸಿದ, ಅನುಗ್ರಹಿಸಿದ, ಪ್ರೇರಿಸಿದ, ಪ್ರಚೋದಿಸಿದ ಮಾತುಗಳಿಂದಲೇ ಸ್ತುತಿಸಿ ಧನ್ಯರಾಗಬೇಕು. ಎಲ್ಲ ಸಾಮಗ್ರಿಗಳನ್ನೂ ತಾನೇ ಸೃಷ್ಟಿಸಿ ಸಿದ್ಧಮಾಡಿಕೊಟ್ಟು, ಉಪಯೋಗಿಸಿಕೊಳ್ಳುವ ಸಾಧನ ಸಾಮಗ್ರಿಗಳನ್ನೂ ಒದಗಿಸಿ, ಬಳಸಿಕೊಳ್ಳುವ ಬುದ್ಧಿ ಶಕ್ತಿಯನ್ನೂ ಅನುಗ್ರಹಿಸಿ ಈ ಕೆಲಸಮಾಡಿ ಧನ್ಯನಾಗು ಎನ್ನುವ ಆಕೆಯ ಕರುಣೆ, ವಾತ್ಸಲ್ಯ ಜಗಜ್ಜೀವನಕ್ಕೆ ಅತ್ಯಗತ್ಯವಾದ ಆಧಾರಸ್ಥಂಭಗಳು. ಆದ್ದರಿಂದಲೇ ಭಗವತ್ಪಾದರು "ತ್ವದೀಯಾಭಿರ್ವಾಗ್ಭಿಸ್ತವ ಜನನಿ ವಾಚಾಂ ಸ್ತುತಿ ರಿಯಂ"– ಎಂದರು. ಆಚಾರ್ಯ ಶಂಕರರ ಈ ಕೃತಿರತ್ನಕ್ಕೆ ಅನ್ವಯವಾಗುವಂತೆ, ಕಾಳಿದಾಸನ ಒಂದುಮಾತು ಇಲ್ಲಿ ಬರೆಯುವುದು ಅಪ್ರಾಸಂಗಿಕವಾಗಲಾರದು.

ಯೇ ತ್ವಾಂ ಅಂಬ
ನ ಶೀಲಯಂತಿ ಮನಸಾ
ತೇಷಾಂ ಕವಿತ್ವಂ ಕುತಃ?

ವಾಗ್ರೂಪಿಣಿಯಾದ ಆಕೆಯನ್ನು ಯಾರು ಧ್ಯಾನಿಸುವುದಿಲ್ಲ, ಅವರಿಗೆ ಕಾವ್ಯರಚನಾ ಶಕ್ತಿ ಹೇಗೆ ಬಂದೀತು? ಯಾರು ಆಕೆಯನ್ನು ಶ್ರದ್ಧಾಸಕ್ತಿಯಿಂದ ಉಪಾಸಿಸುತ್ತಾರೆ, ಯಾರು ಆಕೆಯ ಕೃಪಾವೃಷ್ಟಿಗೆ ಪಾತ್ರರಾಗಿದ್ದಾರೆ ಅಂತಹವರ ಕವಿತೆ–ಸುರಸರಿತ್ ಕಲ್ಲೋಲ ಲೋಲೋರ್ಮಿವತ್. ಪ್ರವಹಿಸುತ್ತದೆ – ಎನ್ನುತ್ತಾನೆ ಕಾಳಿದಾಸ.

ಗಗನಂ ಗಗನಾಕಾರಂ ಸಾಗರಸ್ಸಾಗರೋಪಮಃ – ಎಂಬಂತೆ ಸೌಂದರ್ಯಲಹರಿಗೆ-ಸೌಂದರ್ಯ ಲಹರಿಯೆ ಸರಿಸಾಟಿ. ಹೋಲಿಕೆ ಹಾಕಲು ಬೇರೊಂದು ಗ್ರಂಥವಿಲ್ಲ. ಜಗನ್ಮಾತೆಯನ್ನು ಒಂದು ಕಡೆ ಶಂಕರರು ಹೀಗೆ ಬೇಡಿಕೊಂಡಿದ್ದಾರೆ—

ಶ್ರುತೀನಾಂ ಮೂರ್ಧಾನೋ ದಧತಿ
ತವ ಯೌ ಶೇಖರತಯಾ
ಮಮಾಪ್ಯೇತೌ-ಮಾತಃ ಶಿರಸಿ
ದಯಯಾ ದೇಹಿ ಚರಣೌ ||

ಸಮಸ್ತ ಜಗತ್ತು ಆಕೆಯ ಕೃಪಾಭಿಕ್ಷೆಗಾಗಿ ಕೈಯೊಡ್ಡಿ ನಿಂತಿದೆಯಷ್ಟೆ. ನಮ್ಮ ನಾಡಿನ ಎಲ್ಲ ಹಿರಿಯರೂ ಬೇಡಿಕೊಂಡಿರುವುದಿಷ್ಟೇ- "ಮಾತಾ-ತೌ ಚರಣೌ - ದಯಯಾ, ಕೃಪಯಾ - ಮಮ ಶಿರಸಿ ದೇಹಿ"!!

ಶತ ಶ್ಲೋಕಗಳ ಈ ಕೃತಿಗೆ, ತಂತ್ರ ಶಾಸ್ತ್ರಾನುಸಾರ ವಿವರಣೆ ನೀಡುತ್ತ ಹೋದರೆ, ಅದೇ ಒಂದು ಪ್ರತ್ಯೇಕ ಸುದೀರ್ಘ ಪ್ರಬಂಧವಾದೀತು. ಸೌಂದರ್ಯ ಲಹರಿಗೆ, ಸುಧಾವಿದ್ಯೋತಿನಿ, ಸೌಭಾಗ್ಯ ವರ್ಧಿನಿ, ಲಕ್ಷ್ಮೀಧರವ್ಯಾಖ್ಯಾ, ಕಾಮದೇವ ಸೂರೀಯಟೀಕಾ, ಡಿಂಡಿಮವ್ಯಾಖ್ಯಾ-ಸಹಜಾನಂದೀಯವ್ಯಾಖ್ಯಾ... ಇತ್ಯಾದಿ ವ್ಯಾಖ್ಯಾನ ಗ್ರಂಥಗಳು ಹೇರಳವಾಗಿವೆ. ವ್ಯಾಖ್ಯಾನಕಾರರು ತಂತಮ್ಮ ದೃಷ್ಟಿಕೋನ ದಿಂದ ಈ ಗ್ರಂಥವನ್ನು ತೂಗಿನೋಡಿದ್ದಾರೆ; ವಿವರಿಸಿ, ವ್ಯಾಖ್ಯಾನಿಸಿ ಕೃತಾರ್ಥರಾಗಿದ್ದಾರೆ. ಆದರೆ ದೈವೀ ಸೌಂದರ್ಯ ಲಹರಿಯ ಸಮಗ್ರ ಸ್ವರೂಪ ಭಗವತ್ಪಾದರಿಗೆ ಮಾತ್ರ ವೇದ್ಯವಾಗಿತ್ತು; ಏಕೆಂದರೆ ಋಗ್ವೇದದ ದೇವೀಸೂಕ್ತದಲ್ಲಿ ಒಂದು ಮಾತಿದೆ-

"ಯಂ ಕಾಮಯೇ ತಂ ತಮುಗ್ರಂ ಕೃಣೋಮಿ, ತಂ ಬ್ರಹ್ಮಾಣಂ, ತಂ ಋಷಿಂ, ತಂ ಸುಮೇಧಾಮ್ ||

ಆಕೆಯ ಕೃಪಾಪಾತ್ರರಾಗಿ, ಬ್ರಹ್ಮಾಣಂ, ಋಷಿಂ, ಸುಮೇಧಾಂ ಆಗಿದ್ದವರು ಆಚಾರ್ಯ ಶಂಕರ ಭಗವತ್ಪಾದರು.

ಯಾರ ದಿವ್ಯ ಭವ್ಯ ಸೌಂದರ್ಯಲಹರಿ, ಚೇತೋಹಾರಿಯಾದ ಧಾಟಿಯಲ್ಲಿ, ಸರಿಸಾಟಿ ಇಲ್ಲದ ರೀತಿಯಲ್ಲಿ, ಕವಿವಾಣಿಯಾಗಿ ಪ್ರವಹಿಸಿದೆಯೋ, ಆ ಋತಚಿನ್ಮಯಿ ಜಗದ್ಧಾತ್ರಿಯನ್ನು ಬೇಡಿಕೊಳ್ಳುವುದೊಂದೇ ನಮ್ಮ ಕರ್ತವ್ಯ- "ಅವತು ಮಾಂ, ಅವತು ವಕ್ತಾರಂ"—ಎಂದು.

---



(6ನೇ ಪುಟದಿಂದ)

ಯುತ್ತವೆ. ಮಕರ ಸಂಕ್ರಮಣ ಪೂರ್ವದಲ್ಲಿ ಸಪ್ತೋತ್ಸವ ಹಾಗೂ ಮೂರು ತೇರು ಉತ್ಸವ, ಮರುದಿನ ಚೂರ್ಣೋತ್ಸವ. ಲಕ್ಷಾಂತರ ಯಾತ್ರಿಕರ ಕಣ್ಮನ ಸೆಳೆವ ಅಪೂರ್ವ ಸಂಭ್ರಮ. ಎರಡು ವರ್ಷಗಳಿಗೊಮ್ಮೆ ಜನವರಿ 18 ರಂದು ಪರ್ಯಾಯೋತ್ಸವದ ವಿಶಿಷ್ಟ ಸಂಭ್ರಮ, ಅಪೂರ್ವ ನೋಟಗಳು. ಸಪ್ತೋತ್ಸವ ಪರ್ಯಾಯೋತ್ಸವದ ವೀಕ್ಷಣೆಗೆ ದೇಶ ವಿದೇಶಿ ಯಾತ್ರಿಕರು ಉಡುಪಿಯಲ್ಲಿ ಕಲೆಯುತ್ತಾರೆ. ಪೇಜಾವರ ಮಠದ ಶ್ರೀ ವಿಶ್ವೇಶ ತೀರ್ಥ ಶ್ರೀಪಾದರು ಪ್ರಸ್ತುತ ಸಾಲಿನ ಪರ್ಯಾಯ ಪೀಠಾರೂಢ ಯತಿವರ್ಯರು.

ಶ್ರೀಗಳವರ ಉಪಸ್ಥಿತಿಯಲ್ಲಿ ಧಾರ್ಮಿಕ ಉಪನ್ಯಾಸ, ಪ್ರವಚನ, ಸಾಂಸ್ಕೃತಿಕ ಕಾರ್ಯಕ್ರಮಗಳ ಸಾಲು ಸಾಲು ಉಡುಪಿಯಲ್ಲಿ ಸಮ್ಮಿಳಿತವಾಗುತ್ತಿದೆ. ಇದಕ್ಕೆ ಕಳಶವಿಟ್ಟಂತೆ ಇದೇ ಜನವರಿ 14 ರಿಂದ 16 ರವರೆಗೆ ಉಡುಪಿಯಲ್ಲಿ ಶ್ರೀಕೃಷ್ಣ ಪ್ರತಿಷ್ಠಾ ಸಪ್ತಮ ಶತಮಾನೋತ್ಸವವನ್ನು ಅತ್ಯುತ್ಸಾಹ, ಸಂಭ್ರಮದಿಂದ ಆಚರಿಸಲು ಸಿದ್ಧತೆ ಸಾಗುತ್ತಿದೆ. ಹತ್ತು ಹಲವು ಧಾರ್ಮಿಕ, ಸಾಂಸ್ಕೃತಿಕ ಸಾಮಾಜಿಕ ಮಹತ್ತ್ವದ ಉಪಯುಕ್ತಕರ ಚಟುವಟಿಕೆಗಳನ್ನು ಸಪ್ತಮ ಶತಮಾನೋತ್ಸವದ ಮುಖ್ಯಕಾರ್ಯಕ್ರಮಗಳಲ್ಲಿ ರೂಪಿಸಲಾಗಿದೆ. ಕೃಷ್ಣ ಮಠದ ಸರ್ವಾಂಗೀಣ ಅಭಿವೃದ್ಧಿ ಕಾರ್ಯ ತ್ವರಿತವಾಗಿ ಸಾಗುತ್ತಿದೆ. ರಾಷ್ಟ್ರಮಟ್ಟದಲ್ಲಿ ಅಪೂರ್ವರೀತಿಯಲ್ಲಿ ನಡೆಸಲು ಯೋಜಿಸಿರುವ ಸಂಭ್ರಮೋತ್ಸವದ ನಿರ್ವಹಣೆಗೆ ಈಗಾಗಲೇ ವಿವಿಧ ಸಮಿತಿ-ಉಪ ಸಮಿತಿಗಳು ರೂಪುಗೊಂಡಿವೆ. ಶ್ರೀ ಕೃಷ್ಣನ ಪ್ರತಿಷ್ಠಾಪನೆಯ ಹಿನ್ನೆಲೆಯಲ್ಲಿ ಮಲ್ಪೆಯ ವಡಭಾಂಡೇಶ್ವರದಿಂದ ಕೃಷ್ಣ ಪ್ರತೀಕದ ಸಂಭ್ರಮಯುಕ್ತ ಮೆರವಣಿಗೆ ಉಡುಪಿಯತ್ತ ಚಿತ್ತೈಸಲಿದೆ. ರಾಜಾಂಗಣದಲ್ಲಿ ಧಾರ್ಮಿಕ ಕಾರ್ಯಕ್ರಮಗಳ ಸಮ್ಮಿಳನ. ಅಂತರಾಷ್ಟ್ರೀಯ ಮಟ್ಟದ ಕೃಷ್ಣ ಭಕ್ತಿ ಸಮ್ಮೇಳನ, ವಿದ್ವತ್ ಗೋಷ್ಠಿ, ವಸ್ತು ವಿಶೇಷ ಪ್ರದರ್ಶನ, ವಿಪ್ವದ್ಗ್ರಂಥ ಪ್ರಕಾಶನ, ಕೀರ್ತನ ಸ್ಪರ್ಧೆ, ಸ್ಮರಣ ಸಂಚಿಕೆ, ಕಲಾವಿದರ ಸಂಗೀತ ಕಚೇರಿ, ನೃತ್ಯ-ಮನರಂಜನಾ ಕಾರ್ಯಕ್ರಮಗಳ ಸುಗ್ಗಿ. ಮೂರು ದಿನಗಳ ಅಪೂರ್ವ ಸಂದರ್ಭದ ಚಾರಿತ್ರಿಕ ಉತ್ಸವ ಉಡುಪಿಯ ಇತಿಹಾಸದಲ್ಲೇ ಚಿರಸ್ಥಾಯಿಯಾಗಿ ಉಳಿಯುವಂತೆ ಜರುಗಲಿದೆ. ಉಡುಪಿಯ ಕೃಷ್ಣನ ಸನ್ನಿಧಿಯಲ್ಲಿ ಧರ್ಮಕ್ರಾಂತಿ, ಧಾರ್ಮಿಕ ಪುನರುತ್ಥಾನದ ಕಹಳೆ ಮೊಳಗಲಿದೆ.

★

## ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕ ವಸತಿ ಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ.

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

### ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' x 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳದೊಂದಿಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

### ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ.

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' x 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

### ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 60 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ



ಸುಪ್ರಭಾತ ಸ್ಪರ್ಧೆಗಳ ಬಹುಮಾನವಿತರಣಾಸಮಾರಂಭದಲ್ಲಿ ಮಾತನಾಡುತ್ತ ಶ್ರೀ ಅಶೋಕನಾಥ ಬ್ಯಾನರ್ಜಿ. ಕುಳಿತಿರುವವರು – ಎಡದಿಂದ ಶ್ರೀ ವಿ. ಆರ್. ನಾಯುಡು, ಕಂದಾಯ ಮಂತ್ರಿ ಪ್ರೊ॥ ಲಕ್ಷ್ಮೀ ಸಾಗರ್, ಶ್ರೀಮತಿ ಸುಬ್ರತೋ ಬ್ಯಾನರ್ಜಿ, ತಿ. ತಿ. ದೇ. ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಹಾಗೂ ತಿ. ತಿ. ದೇ. ವೆಲ್‌ಫೇರ್ ಆಫೀಸರ್ ಶ್ರೀ ಎಂ. ರಾಮಕೃಷ್ಣಯ್ಯ.

---

ಶ್ರೀಮತಿ ಸುಬ್ರತೋ ಬ್ಯಾನರ್ಜಿಯವರಿಂದ ಮೊಮೆಂಟೋವನ್ನು ಸ್ವೀಕರಿಸುತ್ತ ಶ್ರೀ ಡಿ. ಸುಬ್ಬರಾಯುಲು ಅವರು.



# ವಾರ್ತಾಲಹರಿ

## ಬೆಂಗಳೂರಿನಲ್ಲಿ ಸುಪ್ರಭಾತ ಸ್ಪರ್ಧೆಗಳು

ಬೆಂಗಳೂರಿನ ತಿ. ತಿ. ದೇ. ವಿಚಾರಣಾ ಕೇಂದ್ರದಲ್ಲಿ ದಿನಾಂಕ 6–12–84 ರಂದು ಸುಪ್ರಭಾತ ಸ್ಪರ್ಧೆಯ 27 ನೇವರ್ಷದ ಬಹುಮಾನ ವಿತರಣಾ ಸಮಾರಂಭವು ಕರ್ನಾಟಕ ರಾಜ್ಯಪಾಲ ಶ್ರೀ ಅಶೋಕನಾಥ ಬ್ಯಾನರ್ಜಿ ಅವರ ಅಧ್ಯಕ್ಷತೆಯಲ್ಲಿ ಘನವಾಗಿ ನಡೆಯಿತು.

ರಾಜ್ಯಪಾಲರು ಮಾತನಾಡುತ್ತ ಭಕ್ತಿ ಸಂಪ್ರದಾಯದ ಮೂಲವನ್ನು ಗುರುತಿಸುತ್ತ ಭಕ್ತಿ ಧರ್ಮಗಳ ಪ್ರಜ್ಞೆಯನ್ನು ಹರಡುವಲ್ಲಿ ಸ್ಥಳೀಯ ಕೇಂದ್ರದ ಸೇವೆಯನ್ನೂ ಕೊಂಡಾಡಿದರು. ಭಕ್ತಿಯಿಂದ ಶಾಂತಿ ಅಭಿವೃದ್ಧಿಗಳು ಹೆಚ್ಚುವವೆಂದೂ ಇದನ್ನು ಹರಡುವಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯ ಅನುಗ್ರಹವುಂಟಾಗುವುದೆಂದೂ ನುಡಿದ ಅವರು, ಭಕ್ತಿ ಸಂಪ್ರದಾಯದ ಪ್ರಸಾರದಿಂದ ದೇಶವನ್ನು ಪರಂಪರಾಗತ ಪರಮೋನ್ನತಿಯತ್ತ ಒಯ್ಯಲು ಸಾಧ್ಯವೆಂದೂ ತಿಳಿಸಿದರು.

ಮುಖ್ಯ ಅತಿಥಿಯಾಗಿ ಆಗಮಿಸಿದ ಕರ್ನಾಟಕದ ಕಂದಾಯ ಇಲಾಖಾ ಮಂತ್ರಿ ಪ್ರೊ॥ ಲಕ್ಷ್ಮೀಸಾಗರ್ ಅವರು ಮಾತನಾಡುತ್ತಾ ದೇಶದ ಏಕತೆ, ಭದ್ರತೆಗಳಲ್ಲಿ ಧರ್ಮ, ಭಕ್ತಿಗಳ ಪಾತ್ರ ಹಿರಿದೆಂದೂ ಸುಪ್ರಭಾತ ಸ್ಪರ್ಧೆಗಳಂತಹ ಸಾಂಸ್ಕೃತಿಕ ಚಟುವಟಿಕೆಗಳಿಂದ ನೆನಪಿನ ಶಕ್ತಿ ಹೆಚ್ಚುವುದೆಂದೂ ನುಡಿದು, ಸ್ವತಃ ಉಪಾಧ್ಯಾಯರಾಗಿರುವ ತಮಗೆ ನೆನಪಿನ ಪ್ರಾಮುಖ್ಯದ ಅರಿವಿದೆಯೆಂದೂ, ಎಂತಲೇ ಸಂಸ್ಕೃತದ ಅಧ್ಯಯನವನ್ನು ಅವಧಾರಿಸುತ್ತಿರುವುದಾಗಿಯೂ ತಿಳಿಸಿದರು.

ರಾಜ್ಯಪಾಲ ಶ್ರೀ ಬ್ಯಾನರ್ಜಿ ಅವರ ಧರ್ಮಪತ್ನಿ ಸುಬ್ರತೋ ಬ್ಯಾನರ್ಜಿ ಅವರು ಸ್ಪರ್ಧೆಗಳಲ್ಲಿನ ವಿಜೇತರಿಗೆ ಬಹುಮಾನ ವಿತರಣೆ ಮಾಡಿದರು. ಜೊತೆಗೇ ಸ್ಥಳೀಯ ಸಲಹಾಮಂಡಳಿಯ ಸ್ಥಾಪಕ್ಕೆ ಸದಸ್ಯ ಶ್ರೀ ಕೆ. ವಿ. ವೆಂಕಟನರಸಿಂಹಯ್ಯ ಹಾಗೂ ಸ್ಥಳೀಯ ವಿಚಾರಣಾ ಕೇಂದ್ರದ ಮ್ಯಾನೇಜರ್ ಶ್ರೀ ಯುಗಂಧರ್ ಅವರನ್ನು ಸನ್ಮಾನಿಸಿದರು.

ಶ್ರೀಮತಿ ಅನಂತಲಕ್ಷ್ಮೀ ನಟರಾಜನ್ ಅವರ ಪ್ರಾರ್ಥನೆಯಿಂದ ಆರಂಭವಾದ ಸಭೆಯಲ್ಲಿ ಸ್ವಾಗತವನ್ನು ಬಯಸುತ್ತ ಸ್ಥಳೀಯ ಮಂಡಳಿಯ ಅಧ್ಯಕ್ಷ ಶ್ರೀ ದೀನಬಂಧು ವಿ. ಆರ್. ನಾಯುಡು ಅವರು ಬಾಲಾಜಿಯ ಭಕ್ತಿಯ ಪ್ರಭಾವ ಇಡೀ ಜಗದಲ್ಲಿ ಹರಡುತ್ತಿರುವಿಕೆಯನ್ನು ವಿವರಿಸಿದರು. ಶ್ರೀ ಎಸ್. ಆರ್. ಶ್ರೀನಿವಾಸನ್ ಅವರು ವರದಿಯನ್ನು ಓದಿದರು.

ತಿ. ತಿ. ದೇವಸ್ಥಾನಗಳ ಪರವಾಗಿ ಮಾತನಾಡುತ್ತ ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯುಲು ಅವರು ಮಾತನಾಡುತ್ತ ಸ್ಥಳೀಯ ಮಂಡಳಿಯು ಕರ್ನಾಟಕ, ಆಂಧ್ರಗಳನಡುವೆ ಮಾತ್ರವೇ ಅಲ್ಲದೆ ಇಡೀ ದೇಶ ಹಾಗೂ ಭಕ್ತಿ ತತ್ತ್ವದ ನಡುವಣ ಸ್ನೇಹಸೇತು ವಿನಂತೆ ಕೆಲಸವಮಾಡುತ್ತಿದೆಯೆಂದೂ, ಅದಕ್ಕಾಗಿ ತಿ. ತಿ. ದೇ. ಆಡಳಿತದ ಪರವಾಗಿ ತಾವು ವಂದನೆಯನ್ನು ಅರ್ಪಿಸುವುದಾಗಿಯೂ ತಿಳಿಸಿದರು.

ಸಮಾರಂಭದ ಕೊನೆಯಲ್ಲಿ ತಿರುಮಲೆಯಿಂದ ತರಿಸಿದ ಶ್ರೀವೆಂಕಟೇಶ್ವರಸ್ವಾಮಿ ತೀರ್ಥಪ್ರಸಾದಗಳನ್ನು ಭಕ್ತರಿಗೆ ಹಂಚಲಾಯಿತು.

## ಹುಬ್ಬಳ್ಳಿಯಲ್ಲಿ ದಾಸಸಾಹಿತ್ಯ ದರ್ಶಿನಿ

ತಿ. ತಿ. ದೇ. ಗಳ ದಾಸಸಾಹಿತ್ಯ ಪ್ರಾಜೆಕ್ಟ್ ಜನವರಿ ತಿಂಗಳ ಆರಂಭದಲ್ಲಿ ಹುಬ್ಬಳ್ಳಿಯಲ್ಲಿ ದಾಸಸಾಹಿತ್ಯ ಪ್ರದರ್ಶನವನ್ನು ನಾಲ್ಕುದಿನಗಳ ಕಾಲ ಏರ್ಪಡಿಸುವರೆಂದು ವರದಿಯಾಗಿದೆ.

ಹುಬ್ಬಳ್ಳಿಯ ಕುಮಾರವ್ಯಾಸ ಸೇವಾಸಂಘದವರ ಆಶ್ರಯದಲ್ಲಿ ಶ್ರೀ ಸುರೇಂದ್ರದಾನಿ ಹಾಗೂ ದಾಸಸಾಹಿತ್ಯ ಪ್ರಾಜೆಕ್ಟಿನ ಸಲಹಾಮಂಡಳಿ ಸದಸ್ಯ ಶ್ರೀ ಆದ್ಯರಾಮಾಚಾರ್ಯ ಅವರ ಹಿರಿತನದಲ್ಲಿ ಜನವರಿ 1985 ರಲ್ಲಿ ನಡೆಯುವ ಈ ವಸ್ತು ಪ್ರದರ್ಶನದಲ್ಲಿ ಹಲವಾರು ಸಾಹಿತ್ಯಕ, ಸಾಂಸ್ಕೃತಿಕ ಕಾರ್ಯಕ್ರಮಗಳೂ ನಡೆಯುವುವು.

ದಾಸಸಾಹಿತ್ಯವನ್ನು ಕುರಿತು ಸರ್ವಶ್ರೀ ಕಾ.ತ. ಚಿಕ್ಕಣ್ಣ, ಡಾ॥ ಆರ್. ಸತ್ಯನಾರಾಯಣರಾವ್, ಪಂಢರೀನಾಥಾಚಾರ್ಯ ಗಲಗಲಿ ಡಾ॥ ಗುರುಲಿಂಗ ಕಾಪಸೆ, ಎನ್ಕೆ, ಡಾ॥ ಕೆ. ಟಿ. ಪಾಂಡುರಂಗಿ ಮೊದಲಾದ ಹಿರಿಯ ವಿದ್ವಾಂಸರು ಮಾತನಾಡಲಿದ್ದಾರೆ. ಕರ್ನಾಟಕ ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕ ಶ್ರೀ ಐ. ಎಂ. ವಿಠಲಮೂರ್ತಿ ಅವರು ದಾಸಸಾಹಿತ್ಯ ದರ್ಶಿನಿಯನ್ನು ಉದ್ಘಾಟಿಸುವರು. ಮೂರು ಸಾವಿರ ಮಠದ ಜಗದ್ಗುರುಗಳು, ಕರ್ನಾಟಕ ವಿಶ್ವವಿದ್ಯಾಲಯದ ಉಪಕುಲಪತಿಗಳೂ ಭಾಗವಹಿಸುವರೆಂದು ಹೇಳಲಾದ ಈ ಉತ್ಸವಗಳಲ್ಲಿ ಹಲವಾರು ವಿದ್ವಾಂಸರನ್ನು ಸನ್ಮಾನಿಸಲಾಗುವುದು.

ಶ್ರೀ ಹಂಡೇಗುರು ವೇದವ್ಯಾಸರು ಪ್ರದರ್ಶನ ನಡೆಯುವ ನಾಲ್ಕು ದಿನಗಳೂ ಹರಿಕಥೆಯನ್ನೂ ಮಾಡುವರು. ದಿನವೂ ಸಂಗೀತ, ಭಜನೆ ಗೋಷ್ಠಿಗಳಿರುವವೆಂದು ಹೇಳಲಾಗಿದೆ.

## ಹಿಗ್ಗಿನ್ಸ್ ಭಾಗವತರ್ ನಿಧನ

ಹಿಗ್ಗಿನ್ಸ್ ಭಾಗವತರ್ ಎಂದು ಪ್ರಸಿದ್ಧರಾದ ಅಮೆರಿಕೆಯ ಕನೆಕ್ಟಿಕಟ್‌ನ ವೆಸ್ಲಿಯನ್ ವಿಶ್ವವಿದ್ಯಾಲಯದಲ್ಲಿ ಸಂಗೀತ ವಿಭಾಗದ ಪ್ರಧಾನಾಧ್ಯಾಪಕರಾದ ಜಾನ್. ಬಿ. ಹಿಗ್ಗಿನ್ಸ್ ಅವರು 1984 ರ ಡಿಸೆಂಬರಿನಲ್ಲಿ ಅಮೆರಿಕೆಯಲ್ಲಿ ರಸ್ತೆ ಅಘಾತವೊಂದರಲ್ಲಿ ಮೃತರಾದರು ಎಂದು ತಿಳಿಸಲು ವಿಷಾದವಾಗುತ್ತದೆ.

ಕರ್ನಾಟಕ ಸಂಗೀತದಲ್ಲಿ ಅತ್ಯಂತ ಆಸಕ್ತಿಯಿಂದ ಕೂಡಿದ್ದು ಶ್ರೀಮತಿ ಬಾಲಸರಸ್ವತಿ ಅವರಿಂದ ಪ್ರೇರಿತರಾಗಿ ಎರಡೇ ವರ್ಷದಲ್ಲಿ ಕರ್ನಾಟಕ ಸಂಗೀತದಲ್ಲಿ ಪ್ರಕಾಂಡ ಪಂಡಿತರೂ ತಲೆದೂಗುವಷ್ಟು ಪರಿಣತರಾಗಿ ಭಾರತಾದ್ಯಂತ ಸಂಗೀತಸಭೆಗಳನ್ನೂ ನಡೆಸಿ ಹಿಗ್ಗಿನ್ಸ್ ಭಾಗವತರ್ ಎಂದು ಶ್ರೀಯುತರು ಹೆಸರು ಪಡೆದರು.

ಶ್ರೀಯುತರ ಮರಣದಿಂದ ಪಾಶ್ಚಿಮಾತ್ಯ ಜಗತ್ತಿನಲ್ಲಿ ಭಾರತದ ಸಂಗೀತದ ರಾಯಭಾರಿಯೊಬ್ಬನನ್ನು ಕಳೆದುಕೊಂಡಂತಾಗಿದೆಯೆಂದು ಭಾವಿಸಲಾಗಿದೆ.

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ ಫೆಬ್ರವರಿ — 1985**

**ಪೂರ್ಣ ಪ್ರಜ್ಞ ಪ್ರಶಸ್ತಿ** – ತಟ್ಟಿ ವೆಂಕೋಬರಾವ್

**ಜೈನ ಧರ್ಮ ಹಾಗೂ ಕರ್ನಾಟಕ** – ಡಾ॥ ಎನ್. ಅನಂತರಂಗಾಚಾರ್

**ದೇವಾಲಯ-ಶಿಲ್ಪ ಕಲಾ ವೈಭವ** – ಗಟಪತಿಭಟ್ ಅರ್ತಿಕಜೆ

**ಮಾದಾರ ಚೆನ್ನಯ್ಯ** – ಜಯಶ್ರೀ. ಜಿ. ಭಟ್

**ದ್ವೈತ ದರ್ಶನ**

ಡಿ. ಕೃಷ್ಣ ಅಯ್ಯಂಗಾರ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1-00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12-00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

ಬಿಡುಗಡೆಯಾಗಿವೆ

**1985ರಲ್ಲಿ ಹೊಸ ಆಕರ್ಷಣೆ**

1. ಶ್ರೀ ವೆಂಕಟೇಶ್ವರಸ್ವಾಮಿಯವರು
2. ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀ ಅಮ್ಮನವರು

–ತ್ರಿವರ್ಣ ಚಿತ್ರಗಳ ಚಿತ್ತಾಕರ್ಷಕ – ಕ್ಯಾಲೆಂಡರ್

3. ದೈನಂದಿನ ತಿಥಿವಾರ ನಕ್ಷತ್ರಗಳ – ತೆಲುಗು ಕ್ಯಾಲೆಂಡರ್.

ಜೊತೆಗೇ

ತ್ರಿವರ್ಣ ಚಿತ್ರಗಳ 16 ಬಗೆಯ ವಿವಿಧ ಸಂದರ್ಭಗಳ ಶುಭಾಶಯ ಪತ್ರಿಕೆಗಳು.

ವಿವರಗಳಿಗೆ ಬರೆಯಿರಿ :

ವೆಲ್‌ಫೇರ್ ಆಫೀಸರ್, ಸೇಲ್ಸ್‌ವಿಂಗ್,
ತಿ. ತಿ. ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಫೆಬ್ರವರಿ 1985

| | | |
|---|---|---|
| 1 | ಶುಕ್ರವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವಾರಂಭ |
| 5 | ಮಂಗಳವಾರ | ಶ್ರೀ ಗೋವಿಂದರಾಜಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 6 | ಬುಧವಾರ | ತಿರುಮಳಿಶೈಯಾಳ್ವಾರ್ ವರ್ಷ ತಿರುನಕ್ಷತ್ರ |
| 9 | ಶನಿವಾರ | ಶ್ರೀನಿವಾಸ ಮಂಗಾಪುರ ಶ್ರೀ ವೆಂಕಟೇಶ್ವರಸ್ವಾಮಿ – ಬ್ರಹ್ಮೋತ್ಸವಾರಂಭ. ಕೂರತ್ತಾಳ್ವಾರ್ ವರ್ಷ ತಿರುನಕ್ಷತ್ರ |
| 14 | ಗುರುವಾರ | ಶ್ರೀನಿವಾಸ ಮಂಗಾಪುರ ಶ್ರೀ ವೆಂಕಟೇಶ್ವರಸ್ವಾಮಿ – ಗರುಡೋತ್ಸವ |
| 17 | ಭಾನುವಾರ | ಮಹಾಶಿವರಾತ್ರಿ, ಶ್ರೀನಿವಾಸ ಮಂಗಾಪುರ – ಶ್ರೀ ವೆಂಕಟೇಶ್ವರಸ್ವಾಮಿ ರಥೋತ್ಸವ |
| 18 | ಸೋಮವಾರ | ಶ್ರೀನಿವಾಸ ಮಂಗಾಪುರ ಶ್ರೀ ವೆಂಕಟೇಶ್ವರಸ್ವಾಮಿ – ಬ್ರಹ್ಮೋತ್ಸವ ಧ್ವಜಾವರೋಹಣ |

# ಸಪ್ತಗಿರಿ

## ಜಾಹೀರಾತು ದರಗಳು

| | |
|---|---|
| ಪೂರ್ತಿ ಪುಟ | ರೂ 500-00 |
| ಅರ್ಧಪುಟ | ರೂ 300-00 |
| ಕಾಲು ಪುಟ | ರೂ 150-00 |
| ಒಂದು ಕಾಲಂ | ರೂ 200-00 |

ಕೂಡಲೇ ಬರೆಯಿರಿ.

**ಸಂಪಾದಕರು, ಸಪ್ತಗಿರಿ**
ತಿರುಪತಿ.

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

